# "ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಸಹಕಾರಿ ಸಂಘ ಮತ್ತು ಕೃಷಿ ಸಹಕಾರಿ ಬ್ಯಾಂಕುಗಳ ಪಾತ್ರ -ಮಂಗಳೂರು ತಾಲ್ಲೂಕಿನ ಆಯ್ದ ಬ್ಯಾಂಕುಗಳ ಒಂದು ಅಧ್ಯಯನ"

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
(ಅಭಿವೃದ್ಧಿ ಅಧ್ಯಯನ)
ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕರು

ವಿನೋಲ ಸೇಂಡ್ರಾ ಸಿಕ್ವೇರಾ

ನೋಂದಣಿ ಸಂಖ್ಯೆ: **KTSMDS-00693**

ಮಾರ್ಗದರ್ಶಕರು

ಡಾ. ವೈ ರವೀಂದ್ರನಾಥ್ ರಾವ್





ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು - ೫೭೫೦೦೧

ಜುಲೈ, ೨೦೧೪

# “ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಸಹಕಾರಿ ಸಂಘ ಮತ್ತು ಕೃಷಿ ಸಹಕಾರಿ ಬ್ಯಾಂಕುಗಳ ಪಾತ್ರ –ಮಂಗಳೂರು ತಾಲ್ಲೂಕಿನ ಆಯ್ದ ಬ್ಯಾಂಕುಗಳ ಒಂದು ಅಧ್ಯಯನ”

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
(ಅಭಿವೃದ್ಧಿ ಅಧ್ಯಯನ)
ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕರು

ವಿನೋಲ ಸೇಂಡ್ರಾ ಸಿಕ್ವೇರಾ
ನೋಂದಣಿ ಸಂಖ್ಯೆ: **KTSMDS-00693**

ಮಾರ್ಗದರ್ಶಕರು
ಡಾ. ವೈ ರವೀಂದ್ರನಾಥ್ ರಾವ್




ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ ಮಂಗಳೂರು – ೫೭೫೦೦೧
ಜುಲೈ, ೨೦೧೮

# ಯೋಗ್ಯತಾ ಪತ್ರ

ವಿನೋಲ ಸೆಂಡ್ರಾ ಸಿಕೇರಾ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ "ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಸಹಕಾರಿ ಸಂಘ ಮತ್ತು ಕೃಷಿ ಸಹಕಾರಿ ಬ್ಯಾಂಕುಗಳ ಪಾತ್ರ – ಮಂಗಳೂರು ತಾಲೂಕಿನ ಆಯ್ದ ಸಂಘಗಳ ಮತ್ತು ಬ್ಯಾಂಕುಗಳ ಅಧ್ಯಯನ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿಧ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ದಪಡಿಸಿರುತ್ತಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲ ಸ್ವರೂಪವಾಗಿದೆ. ಇವರು ಈ ಸಂಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ.

ಡಾ. ವೈ. ರವೀಂದ್ರನಾಥ ರಾವ್

ಸಂಶೋಧನಾ ಮಾರ್ಗದರ್ಶಕರು

Dr. Y. Ravindranath Rao
M.A., Ph.D.,
Prof & Head Dept. of Sociology
St. Mary's Syrian College
BRAHMAVAR - 576 213 (D.K.)

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

ಸ್ಥಳ: ಬ್ರಹ್ಮಾವರ

ದಿನಾಂಕ: 12-06-14

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ "ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಸಹಕಾರಿ ಸಂಘ ಮತ್ತು ಕೃಷಿ ಸಹಕಾರಿ ಬ್ಯಾಂಕುಗಳ ಪಾತ್ರ, -ಮಂಗಳೂರು ತಾಲೂಕಿನ ಆಯ್ದ ಸಂಘಗಳ ಮತ್ತು ಬ್ಯಾಂಕುಗಳ ಅಧ್ಯಯನ" ಎಂಬ ಈ ಸಂಪ್ರಬಂಧವು. ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲಶ್ರುತಿಯಾಗಿದೆ. ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ವೈ. ರವೀಂದ್ರನಾಥರಾವ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರದಾಯವನ್ನು ಬೇರಾವುದೇ ಪದವೀ, ಡಿಪ್ಲೋಮಾ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ಧೃಢೀಕರಿಸುತ್ತೇನೆ.

Sequeira


ವಿನೋಲ ಸೆಂಡ್ರಾ ಸಿಕ್ವೇರಾ

ಸಂಶೋಧಕರು

ಕರ್ನಾಟಕ ತಿಯೋಲಾಜಿಕಲ್ ಸಂಶೊಧನಾ ಕೇಂದ್ರ

ಬಲ್ಮಠ, ಮಂಗಳೂರು

# ಅಧ್ಯಯನದ ವಿವರಗಳು

# ಅಧ್ಯಾಯ ೧

## ಪೀಠಿಕೆ, ಅಧ್ಯಯನದ ಉದ್ದೇಶ, ಸ್ವರೂಪ ವ್ಯಾಪ್ತಿ

**೧.೧: ಪೀಠೀಕೆ:–**

ಕೃಷಿಯು ಮಾನವನ ಚಟುವಟಿಕೆಗಳಲ್ಲಿ ಬಹುಮುಖ್ಯವಾದ ಮತ್ತು ಅತ್ಯಂತ ಪುರಾತನವಾದ ಕಸುಬಾಗಿದ್ದು ಜಗತ್ತಿನ ಬಹುಜನರ ಜೀವನೋಪಾಯದ ಮಾರ್ಗವಾಗಿದೆ. ಭಾರತವು ಇಂದಿಗೂ ಕೃಷಿ ಪ್ರಧಾನವಾದ ದೇಶವಾಗಿಯೇ ಉಳಿದಿದೆ. ಕರ್ನಾಟಕ ರಾಜ್ಯವು ದಕ್ಷಿಣ ಭಾರತದ ಮಧ್ಯಭಾಗದಲ್ಲಿನ ಪೂರ್ವ ರೇಖಂಶ ೭೪°–೧೫° ರಿಂದ ೧೮°–೩೦° ಹಾಗು ಅಕ್ಷಾಂಶ ೧೧°–೩೦° ರಿಂದ ೧೮°–೩೦° ವರೆಗಿನ ಪ್ರದೇಶವನ್ನು ಆವರಿಸಿದೆ. ಕೃಷಿಯು ಭಾರತದ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬಾಗಿದೆ. ಕೃಷಿಯು ಒಂದು ರೀತಿಯಲ್ಲಿ ಮಾನವ ಮತ್ತು ಪ್ರಕೃತಿಯ ನಡುವಿನ ಹೊಂದಾಣಿಕೆಯ ಕಸುಬಾಗಿದೆ. ರಾಜ್ಯದಲ್ಲಿ ಕೃಷಿಯು ಜೀವನಾಧರ ಕಸುಬಾಗಿರುವುದರಿಂದ ಅದು 'ಪ್ರಾಥಮಿಕ ವಲಯ' ಎಂದು ಪರಿಗಣಿಸಲ್ಪಟ್ಟಿದೆ. ಅದು ಜನರ ಜೀವನ ನಿರ್ವಹಣೆಗೆ ಆಹಾರವನ್ನು ಒದಗಿಸುತ್ತದೆಯಲ್ಲದೆ, ಕೈಗಾರಿಕೆಗಳಿಗೆ ಕಚ್ಚಾ ಸಾಮಾಗ್ರಿಗಳು ಮತ್ತು ಬಹುದೊಡ್ಡ ಸಂಖ್ಯೆಯ ಜನರಿಗೆ ಉದ್ಯೋಗವನ್ನು ಒದಗಿಸುತ್ತದೆ. ಕೃಷಿ ಕರ್ನಾಟಕದ ಆರ್ಥಿಕಾಭಿವೃದ್ಧಿ ಮತ್ತು ಆದಾಯವೃದ್ಧಿಗೆ ತನ್ನದೇ ಆದ ಕೊಡುಗೆಗಳನ್ನು ಸಲ್ಲಿಸುತ್ತಿದೆ. ಕೃಷಿ ಕ್ಷೇತ್ರವನ್ನು ನಿರ್ಲಕ್ಷಿಸಿದರೆ ಆರ್ಥಿಕಾಭಿವೃದ್ಧಿಗೆ ಭದ್ರ ನೆಲೆಯೇ ಇರುವುದಿಲ್ಲ. ಕೃಷಿ ಅಭಿವೃದ್ಧಿಯ ಭದ್ರ ತಳಪಾಯದ ಮೇಲೆ ಕೈಗಾರಿಕೆ, ಸಾರಿಗೆ ಸಂಪರ್ಕ ಮತ್ತು ಇತರ ವಲಯಗಳನ್ನು ಅಭಿವೃದ್ಧಿಪಡಿಸಬೇಕಾಗುತ್ತಿದೆ. ಹೀಗೆ ಕೃಷಿಯು ರಾಜ್ಯದ ಆರ್ಥಿಕ ವ್ಯವಸ್ಥೆಯಲ್ಲಿ ಅತ್ಯಂತ ಮಹತ್ವದ ಸ್ಥಾನ ಪಡೆದಿದೆ. ಕೃಷಿಯ ಸ್ಥಾನ ಹಡಗಿನ ಚುಕ್ಕಾಣಿಯಿದ್ದಂತೆ. ಹೀಗೆ ಕೃಷಿಯು ಬಹುದೊಡ್ಡ ಮುಖ್ಯ ಕಸುಬಾಗಿದ್ದು ಅದನ್ನು ನಿರ್ಲಕ್ಷಿಸಿದರೆ ಬದುಕುವ ಮಾರ್ಗವಿರುವುದಿಲ್ಲ. ಆದುದರಿಂದ ಕೃಷಿಯನ್ನು ಅಭಿವೃದ್ಧಿಪಡಿಸಲು ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗಿದೆ.[1] (S. Arockia Baskarn, (2009) The economic challenger)

ಭಾರತದಲ್ಲಿ ಸಹಕಾರಿ ಚಳುವಳಿ ಗಣನೀಯ ಪ್ರಗತಿಯನ್ನು ಸಾಧಿಸಿದೆ. ೧೯ ನೇ ಮತ್ತು ೨೦ ನೇ ಶತಮಾನದ ಅಡಿಯಲ್ಲಿ ಕೃಷಿಕರಿಗಾಗಿ ಸಾಲ ನೀಡುವ ಯಾವುದೇ ಸಂಘ ವ್ಯವಸ್ಥೆ ಇಲ್ಲದೆ ಕೃಷಿಕರ ಆರ್ಥಕ ಸ್ಥಿತಿ ಹದಗೆಟ್ಟಿತು ಇದನ್ನು ಮನಗಂಡ ಸರಕಾರ ಸಹಕಾರಿ ದೃಷ್ಟಿಕೋನದತ್ತ ಹೆಜ್ಜೆ ಹಾಕಿತು ಕ್ಷಾಮ, ಆರ್ಥಿಕ ಯಾತನೆ ಮತ್ತು ಹೆಚ್ಚಿದ ರೈತರ ಋಣ ಬದ್ಧತೆಯಂಥ ಗಂಭೀರ ಸಮಸ್ಯೆಯನ್ನು ನಿಭಾಯಿಸಲು ಹುಟ್ಟಿಕೊಂಡ ರಂಗವೇ ಸಹಕಾರಿಸಂಘ. ೧೯೦೪ ರ ಸಹಕಾರಿ ಒಕ್ಕೂಟ ಕಾಯಿದೆಯ ಅಡಿಯಲ್ಲಿ ಗ್ರಾಮೀಣ ಪತ್ತಿನ ಸಂಘಗಳು ಕೃಷಿಕರಿಗೆ

ಸಾಲ ನೀಡುವ ಸಲುವಾಗಿ ಸ್ಥಾಪಿತಗೊಂಡವು. ೧೯೧೨ ರಲ್ಲಿ ಅಂಥ ಸಂಘಗಳ ಕಾರ್ಯ ಕ್ಷೇತ್ರದ ವ್ಯಾಪ್ತಿಯನ್ನು ವಿಸ್ತರಿಸಿ ಕೃಷಿ ವಸ್ತುಗಳ ಖರೀದಿ, ಮಾರಾಟ ಉತ್ಪಾದನೆ ಸಂಸ್ಕರಣೆ, ಉಗ್ರಾಣ, ವಸತಿ, ಆರೋಗ್ಯ, ಶಿಕ್ಷಣ ಸೇವೆಗಳನ್ನು ಒಳಗೊಳ್ಳುವಂತೆ ಹಲವಾರು ಕೃಷಿ ಪತ್ತೇತರ ಸಹಕಾರಿ ಸಂಘಗಳು ಮತ್ತು ಕೃಷಿಯೇತ್ತರ ಸಾಲ ನೀಡುವ ಸಹಕಾರ ಸಂಘಗಳನ್ನು ಸ್ಥಾಪಿಸಿ ಬೆಳೆಸಲಾಯಿತು. ಆರಂಭದಲ್ಲಿ ಪ್ರಾಂತೀಯವಾಗಿ ಬೆಳೆಯುತ್ತಾ ಮುಂದಿನ ದಿನಗಳಲ್ಲಿ ಎಲ್ಲಾ ರಾಜ್ಯಗಳು ಅದರ ಬೆಳವಣಿಗೆ ಪೂರಕವಾದ ವಾತಾವರಣವನ್ನು ಕಲ್ಪಿಸಿದವು. ನಮ್ಮ ದೇಶದ ಸನ್ನಿವೇಶದಂತೆ ಶೇಕಡಾ ೭೦ರಷ್ಟು ಜನಸಂಖ್ಯೆ ಕೃಷಿ ಮತ್ತು ಸಂಬಂಧಿತ ಚಟುವಟಿಕೆಗಳನ್ನು ತಮ್ಮ ಜೀವನಕ್ಕಾಗಿ ಅವಲಂಭಿಸಿಕೊಂಡಿದೆ. ಈ ಹಿನ್ನಲೆಯಲ್ಲಿ ಸಹಕಾರಿ ಕ್ಷೇತ್ರ ಅನಿವಾರ್ಯ ಮತ್ತು ಪ್ರಸ್ತುತವೂ ಹೌದು. ೧೯೫೨ ರಲ್ಲಿ ಭಾರತ ಸರ್ಕಾರದ ಭಾರತೀಯ ಈ ರಿಸರ್ವಬ್ಯಾಂಕ್‌ನಲ್ಲಿ ಕೃಷಿ ಪತ್ತಿನ ವಿಭಾಗವನ್ನು ಆರಂಭಿಸಿ ಸಹಕಾರಿ ಕ್ಷೇತ್ರದ ಸಂಸ್ಥೆಗಳಿಗೆ ಹಣಕಾಸು ಸಹಾಯ ಮತ್ತು ಸಾಲವನ್ನು ಒದಗಿಸಿತು.

ಸಹಕಾರಿ ಚಳುವಳಿಯ ಸಹಕಾರದಿಂದ ಉತ್ತಮ ಪ್ರೋತ್ಸಾಹ ಪಡೆಯಿತು. ಪಂಚವಾರ್ಷಿಕ ಯೋಜನೆಗಳಲ್ಲಿ ಸಹಕಾರಿ ಚಳುವಳಿ ಯೋಜಿತ ಅಭಿವೃದ್ಧಿ ಮೂಲ ಮಂತ್ರವಾಯಿತು. ವಿವಿಧ ರೀತಿಯ ಸಹಕಾರಿ ಸಂಘಗಳು ಹಲವು ಸ್ತರಗಳಲ್ಲಿ ಸ್ಥಾಪಿನೆಗೊಂಡವು. ಸಹಕಾರಿ ಪತ್ತಿನ ಸಂಘಗಳು, ಅಲ್ಪಾವಧಿ ಕೃಷಿ ಪತ್ತಿಗಳು ಸಂಘಗಳು, ಪ್ರಾಥಮಿಕ ಪತ್ತಿನ ಸಹಕಾರಿ ಸಂಘಗಳು, ಕೃಷಿಯೇತರ ಪತ್ತಿನ ಸಂಘಗಳು, ಕೃಷಿ ಪತ್ತೇತರ ಸಹಕಾರಿ ಸಂಘಗಳಾದ ರೈತರ ಸೇವಾ ಸಹಕಾರ ಸಂಘ, ಸಹಕಾರಿ ಬೇಸಾಯ ಸಂಘಗಳು, ಸಹಕಾರಿ ಮಾರಾಟ ಸಂಘಗಳು ಮತ್ತು ಕೃಷಿಯೇತರ ಕ್ಷೇತ್ರಗಳಾದ ವ್ಯಾಪಾರ, ಕೈಗಾರಿಕೆ, ಶಿಕ್ಷಣ, ಆರೋಗ್ಯ ಮತ್ತು ಗ್ರಹ ನಿರ್ಮಾಣ ಮುಂತಾದ ಕ್ಷೇತ್ರಗಳಲ್ಲಿ ಹಲವು ಸಹಕಾರ ಸಂಘಗಳು ಸ್ಥಾಪನೆಗೊಂಡವು. ಸಹಕಾರ ಎನ್ನುವಂತಹದು ಆರ್ಥಿಕ ರಂಗಕ್ಕೆ ಸಂಬಂಧಿಸಿದ್ದುದಾಗಿದೆ. ನಾಲ್ಕಾರು ಜನರು ತಮ್ಮ ಹಿತಸಾಧನೆಗಾಗಿ ತಮ್ಮ ಶ್ರಮ ಸಂಪನ್ಮೂಲಗಳನ್ನು ಒಂದುಗೂಡಿಸಿ ದುಡಿಸುವುದೇ ಸಹಕಾರ. ಇದಕ್ಕಾಗಿ ಸಹಕಾರಿ ಸಂಘಗಳನ್ನು ರೂಪಿಸಲಾಗುತ್ತದೆ. ತಮ್ಮ ಆರ್ಥಿಕ ಹಿತಾಸಕ್ತಿಗಳನ್ನು ಕಾಪಾಡಲು ಜನರು ಸಮಾನತೆಯ ಆಧಾರದ ಮೇಲೆ ಸ್ವ ಇಚ್ಚೆಯಿಂದ ಸಂಘಟಿತರಾಗುವುದೇ ಸಹಕಾರಿಸಂಘ. ಇತ್ತೀಚೆನ ದಿನಗಳಲ್ಲಿ ರಾಜ್ಯದ ಕೆಲವೆಡೆ ಸಹಕಾರಿ ಮಾರುಕಟ್ಟೆಗಳನ್ನು ಅಭಿವೃದ್ಧಿ ಪಡೆಸಲಾಗಿದೆ. ಇದರಿಂದಾಗಿ ರೈತರು ಅನಾವಶ್ಯಕ ಶೋಷಣೆಗೆ ಒಳಗುವುದನ್ನು ತಪ್ಪಿಸುವುದು ಸ್ವಲ್ಪ ಮಟ್ಟಿಗೆ ಸಾಧ್ಯವಾಗಿದೆ. “ತಾನು ಎಲ್ಲರಿಗಾಗಿ, ಎಲ್ಲುರು ತನಗಾಗಿ” (Each for all and

all for each) ಎಂಬುವುದು ಸಹಕಾರದ ಮೂಲ ತತ್ವವಾಗಿದೆ. ಈ ವ್ಯವಸ್ಥೆಯಲ್ಲಿ ಅಲ್ಪಾದಾಯದ ವ್ಯಕ್ತಿಗಳಿಗೆ ಹೆಚ್ಚು ಅನುಕೂಲವಾಗುತ್ತದೆ.

ಆರ್ಥಿಕ ಬೆಳವಣಿಗೆ ವೇಗ ಸಾಮಾನ್ಯವಾಗಿ ಬಂಡವಾಳ ಹೂಡಿಕೆ ತಂತ್ರಜ್ಞಾನ ಹಾಗೂ ಶ್ರಮಶಕ್ತಿ, ಕೂಡಿದ ಉತ್ಪಾದನಾಂಗಗಳ ಪೂರೈಕೆಯ ಮೇಲೆ ಅವಲಂಭಿಸಿರುತ್ತದೆ. ರಾಜಶಾಸ್ತ್ರ ಪಿತಾಮಹ ಅರಿಸ್ಟಾಟಲ್ ಹೇಳಿಕೆಯಂತೆ "ಮಾನವ ಸಮಾಜಜೀವಿ ಸಂಘಜೀವಿ. ಅವನು ಒಬ್ಬನೇ ಜೀವಿಸಲಾರ, ಒಂಟಿಯಾಗಿ ಜೀವಿಸುವುದು ಅತಿಕಷ್ಟ" ಇದಕ್ಕಾಗಿ ಮಾನವ ಸಹಜವಾಗಿಯೇ ಸಂಘ ಸಂಸ್ಥೆಗಳನ್ನು ಕಟ್ಟಿದ್ದಾನೆ.

ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಈ ಅಧ್ಯಯನಕ್ಕಾಗಿ ಮಂಗಳೂರು ತಾಲೂಕಿನ ಆಯ್ದ ನಾಲ್ಕು ಕೃಷಿ ಸಹಕಾರಿ ಬ್ಯಾಂಕುಗಳ ಕಾರ್ಯಚಟುವಟಿಕೆಗಳನ್ನು ಕ್ಷೇತ್ರರಾಜ್ಯದ ಮೂಲಕ ಮಾಹಿತಿ ವಿಶ್ಲೇಷಿಸಲಾಗಿದೆ.

**೧.೨: ಅಧ್ಯಯನಕ್ಕೆ ಮೂಲವಾಗಿರುವ ಸಮಸ್ಯೆಗಳು:–**

ಕೃಷಿಯು ಮಾನವನ ಆರ್ಥಿಕ ಚಟುವಟಿಕೆಗಳಲ್ಲಿ ಬಹುಮುಖ್ಯ ಕಸುಬಾಗಿದೆ. ಹೆಚ್ಚಿನ ಜನರು ಈಗಲೂ ಕೃಷಿಯನ್ನು ಅವಲಂಭಿಸಿದ್ದಾರೆ. ಜನರ ಜೀವನೋಪಾಯ ಮಾರ್ಗವಾಗಿದೆ.

ಮಾನವನಿಗೆ ಅಗತ್ಯವಿರುವ ಆಹಾರ ಪದಾರ್ಥಗಳನ್ನು ಪಡೆಯುವುದಕ್ಕೋಸ್ಕರ ಭೂಮಿಯನ್ನು ಉಳೂಮೆ ಮಾಡುವುದೇ ಕೃಷಿಯಾಗಿದೆ. ರಾಜ್ಯದಲ್ಲಿ ರೈತರು ಇಂದಿಗೂ ತೀರಾ ಹಳೆಯದಾದ ಮತ್ತು ವೈಜ್ಞಾನಿಕ ಕೃಷಿ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಅತ್ಯಾಧುನಿಕ ಯಂತ್ರಗಳು ಮತ್ತು ಉಪಕರಣಗಳ ಬಳಕೆಯತ್ತ ಗಮನಹರಿಸುತ್ತಲೇ ಇಲ್ಲ. ಆದುದರಿಂದ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಜನರು ಬಹುತೇಕ ಕೃಷಿಕರಾಗಿದ್ದು ಕೃಷಿ ಸಾಧನಗಳಾಗಿರುವ ನೇಗಿಲು, ಎತ್ತುಗಾಡಿ ಮುಂತಾದ ಮತ್ತು ಕೃಷಿ ಚಟುವಟಿಕೆಗಳಿಗೆ ಮುಖ್ಯವಾಗಿ ಬೇಕಾಗಿರುವ ಬಿತ್ತನೆಬೀಜ, ರಸಗೊಬ್ಬರ, ಕ್ರಿಮಿನಾಶಕ ಔಷಧಿಗಳನ್ನುಕೊಳ್ಳಲು ಹಣದ ಕೊರತೆ ಇದ್ದು, ಹಣಕ್ಕಾಗಿ ಖಾಸಾಗಿ ಲೇವಾದೇವಿದಾರರಿಂದ ಸಾಲ ಪಡೆಯಬೇಕಾಗಿದೆ. ಈ ಸಾಲವು ಅಸೌಪಚಾರಿಕ ಅನಾಧಿಕೃತ ರೀತಿಯಲ್ಲಿದ್ದು ಹೆಚ್ಚಿನ ಬಡ್ಡಿಯನ್ನು ತೆರೆಯಬೇಕಾಗುತ್ತದೆ. ಹಣಕಾಸಿನ ಅಡಚನೇಯು ಯಾಂತ್ರಿಕರಣ ಮತ್ತು ವೈಜ್ಞನಿಕ ಬೇಸಾಯಕ್ಕೆ ಅಡ್ಡಿಯಾಗಿದೆ. ರಾಜ್ಯದಲ್ಲಿ ರೈತರಿಗೆ ಸಾಕಷ್ಟು ಹಣಕಾಸಿನ ಸೌಲಭ್ಯ ದೊರೆಯುತ್ತಿಲ್ಲ. ಕೃಷಿಗೆ ಹಣಕಾಸಿನ

ಸೌಲಭ್ಯಗಳನ್ನು ಒದಗಿಸುವ ಹಣಕಾಸಿನ ಸಂಸ್ಥೆಗಳು ಸಾಕಷ್ಟು ಅಭಿವೃದ್ಧಿಗೊಂಡಿಲ್ಲ. ಇದರಿಂದಾಗಿ ರೈತರು ಅನಿವಾರ್ಯವಾಗಿ ಹೆಚ್ಚು ಬಡ್ಡಿ ತೆತ್ತು ಲೇವಾದೇವಿಗಾರರ ಹತೋಟಿಯಲ್ಲಿ ಬದುಕಬೇಕಾದ ಪರಿಸ್ಥಿತಿ ಉದ್ಭವವಾಗಿದೆ. ಈ ರೀತಿ ಮಾಡುವುದರಿಂದ ಕೃಷಿ ಸಾಲವನ್ನು ತೀರಿಸಲಾಗಿದೆ. ಕೆಲವು ಆತ್ಮಹತ್ಯೆ ಪ್ರಕರಣಗಳು ಆಗಿರುದೂ ಉಂಟು. ಹೀಗಾಗಿ ನಮ್ಮಲ್ಲಿ "ರೈತ ಸಾಲದಲ್ಲೇ ಜನಿಸಿ, ಸಾಲದಲ್ಲೇ ಬೆಳೆದು, ಸಾಲದಲ್ಲೇ ಸತ್ತು ತನ್ನ ಮಕ್ಕಳಿಗೆ ಸಾಲದ ಹೊರೆಯನ್ನೇ ಬಳುವಳಿಯಾಗಿ ಬಿಟ್ಟುಹೋಗುತ್ತಾನೆ" ಈ ಸಂದರ್ಭದಲ್ಲಿ ಕೃಷಿ ಸಹಕಾರಿ ಸಂಘಗಳು ಮತ್ತು ಬ್ಯಾಂಕು ಹೆಚ್ಚು ಸಹಕಾರಿಯಾಗುತ್ತದೆ. ೧೯೯೧ ರಲ್ಲಿ ಹೊಸ ಆರ್ಥಿಕ ನೀತಿ ಜಾರಿಗೆ ಭಂದಿತ್ತು. ಬಡವರು ಮತ್ತು ಶ್ರೀಮಂತರ ನಡುವೆ ಅಂತರವಿಲ್ಲದೆ ಸಮತೋಲನದ ಅಭಿವೃದ್ಧಿ ಸಾಧಿಸುವುದು ಪ್ರಮುಖ ಚಿಂತನೆಯ ವಿಷಯವಾಗಿದೆ.

ಇಂತಹ ಸಂದರ್ಭಗಳಲ್ಲಿ ಬಡತನದ ನಿರ್ಮೂಲನೆ ಉದ್ಯೋಗ ಸೃಷ್ಟಿ ಆರೋಗ್ಯ ಸುಧಾರಣೆ ಮಹಿಳಾ ಸುಶಸ್ತಿಕರಣ ಮಾನವ ಅಭಿವೃದ್ಧಿ ಮೊದಲಾದ ಕ್ಷೇತ್ರಗಳಲ್ಲಿ ಸಾಮಾಜಿಕ ಸಂಘಟನೆಗಳು ಹಾಗೂ ಸರ್ಕಾರದ ಸಹಯೋಗದಿಂದ ಕಾರ್ಯ ನಿರ್ವಹಿಸುತ್ತಿರುವ ಸಹಕಾರಿ ಸಂಘಗಳು ಮತ್ತು ಬ್ಯಾಂಕ್ ನೀಡುತ್ತಿರುವ ನೆರವಿನ ಬಗ್ಗೆ ಚಿಂತನೆ ನಡೆಸಬೇಕಾಗಿದೆ.

ಭಾರತದ ಮೂಲ ಕಸುಬು ಕೃಷಿ, ಆದುದರಿಂದ ಕೃಷಿ ರಂಗದಲ್ಲಿ ಅನೇಕ ಬದಲಾವಣೆಗಳಾಗಿವೆ. ಮೊದಲು ನೇಗಿಲು, ಎತ್ತುಗಾಡಿ, ಗದ್ದೆಉಳುಮೆ ಮಾಡಲು ಬಳಸುತ್ತಿದ್ದರು. ಈಗ ಅನೇಕ ಆಧುನಿಕ ವೈಜ್ಞಾನಿಕ ವಿಧಾನವಾದ ಟೆಕ್ಟರ್ ಟಿಲ್ಲರ್ ಮುಂತಾದ ಆಧುನಿಕ ಉಪಕರಣಗಳನ್ನು ಕೃಷಿಕ್ಷೇತ್ರದಲ್ಲಿ ಬಳಸಲಾಗುತ್ತಿದೆ. ಆದುದರಿಂದ ಕೃಷಿ ಕ್ಷೇತ್ರ ಪ್ರಗತಿಯಾಗಿದೆ ಮತ್ತು ಈ ವೈಜ್ಞಾನಿಕ ವಿಧಾನವನ್ನು ಅಳವಡಿಸಿಕೊಳ್ಳಬೇಕಾದರೆ ಹಣದ ಅವಶ್ಯಕತೆಯಾಗಿದೆ. ಮೊದಲು ಹಳೆಯ ಸಂಪ್ರದಾಯಿಕ ವಿಧಾನಗಳಾದ ಎತುಗಾಡಿ, ನೇಗಿಲು, ಉಳುಮೆ ಮಾಡಲು ಬಳಸುತ್ತಿದ್ದರು. ಇದರಿಂದ ಹಚ್ಚಿನ ಇಳುವರಿ ಪಡೆಯಲು ಸಾದ್ಯವಿಲ್ಲ. ಆದುದರಿಂದ ಹಣದ ಅವಶ್ಯಕತೆಗಳನ್ನು ಪೂರೈಸಲು ಕೃಷಿ ಸಹಕಾರಿ ಬ್ಯಾಂಕುಗಳ ಸವಲತ್ತುಗಳು ಮತ್ತು ಅದರಿಂದಾಗುವ ಪ್ರಯೋಜನಗಳ ಬಗ್ಗೆ ಎಲ್ಲಾ ರೈತರಿಗೆ ಸರಿಯಾಗಿ ತಿಳಿದಿಲ್ಲ ಎಂಬುವುದು ಸ್ಥಳೀಯ ಜನರ ಅಭಿಪ್ರಾಯ. ಈ ನಿಟ್ಟಿನಲ್ಲಿ ಬ್ಯಾಂಕುಗಳ ಕಾರ್ಯ ಚಟುವಟಿಕೆಗಳನ್ನು ವಿಶ್ಲೇಷಿಸುತ್ತಾ ಅದರಿಂದ ಮಾಡಲು ಈ ವಿಷಯವನ್ನು ಅಧ್ಯಯನ ವಿಷಯವನ್ನಾಗಿ ಆರಿಸಲಾಗಿದೆ.

೧.೩: ಅಧ್ಯಯನದ ಉದ್ದೇಶಗಳು:–

೧. ಕೃಷಿ ಸಹಕಾರಿ, ಬ್ಯಾಂಕು ಮತ್ತು ಸಂಘಗಳ ಇತಿಹಾಸವನ್ನು ತಿಳಿದುಕೊಳ್ಳುವುದು.

೨. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಆಯ್ದ ಕೃಷಿ ಸಹಕಾರಿ ಬ್ಯಾಂಕು ಮತ್ತು ಸಂಘಗಳನ್ನು ಪಟ್ಟಿಮಾಡುವುದು.

೩. ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಸಹಕಾರಿ ಬ್ಯಾಂಕು ಮತ್ತು ಸಂಘಗಳ ಪಾತ್ರವನ್ನು ಪರಿಶೀಲಿಸುವುದು.

೧.೪: ಊಹೆಗಳು:–

೧. ಕೃಷಿ ಸಹಕಾರಿ ಬ್ಯಾಂಕು ಮತ್ತು ಸಂಘಗಳು ಕೃಷಿಕರಿಗೆ ಕೃಷಿಗೆ ಸಂಬಂಧಪಟ್ಟ ಮಾಹಿತಿಯನ್ನು ನಿರಂತರವಗಿ ಒದಗಿಸುತ್ತಾರೆ.

೨. ಕೃಷಿ ಸಹಕಾರಿ ಬ್ಯಾಂಕು ಮತ್ತು ಸಂಘಗಳಿಂದ ಸಾಕಷ್ಟು ಪ್ರಮಾಣದಲ್ಲಿ ಕ್ರಷಿ ಅಭಿವೃದ್ಧಿಯಾಗಿದೆ.

೧.೫: ಅಧ್ಯಯನದ ವ್ಯಾಪ್ತಿ, ಅಧ್ಯಾಯಗಳು ಮತ್ತು ಇತಿಮಿತಿಗಳು

ಈ ಸಂಶೋಧನಾ ಅಧ್ಯಯನ ವ್ಯಾಪ್ತಿಯನ್ನು ಭೌಗೋಳಿಕವಾಗಿ ಕರ್ನಾಟಕ ರಾಜ್ಯದಲ್ಲಿನ ದಕ್ಷಣಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿಗೆ ಸೀಮಿತಗೊಳಿಸಿದೆ. ಸಹಕಾರಿ ವಲಯವು ಕರ್ನಾಟಕ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಮಹತ್ವ ಪೂರ್ಣ ಪಾತ್ರವನ್ನು ನಿರ್ವಹಿಸುತ್ತದೆ ಹಾಗೂ ಹೆಚ್ಚಾಗಿ ಅದು ಕೃಷಿಯನ್ನು ಅವಲಂಭಿಸಿರುತ್ತದೆ.

ಮೊದಲ ಅಧ್ಯಾಯವು ಪೀಠಿಕೆ, ಅಭಿವೃದ್ದಿ ಅಧ್ಯಯನಕ್ಕೆ ಮೂಲವಾಗಿರುವ ಸಮಸ್ಯೆಗಳು, ಅಧ್ಯಯನದ ಉದ್ದೇಶಗಳು, ವ್ಯಾಪ್ತಿ, ಅಧ್ಯಾಯಗಳು ಮತ್ತು ಇತಿಮಿತಿಗಳು, ಅಧ್ಯಯನದ ವಿಧಾನಗಳ ಸಂಬಂಧಿಸಿದಂತೆ ಸಂಕ್ಷಿಪ್ತ ವಿವರಗಳನ್ನೊಳಗೊಂಡಿದೆ.

ಎರಡನೆಯ ಅಧ್ಯಾಯನದಲ್ಲಿ ಸಹಕಾರದ ಅರ್ಥ ಸಹಕಾರಿ ಸಂಘಗಳ ಉದಯ, ಲಕ್ಷಣಗಳು, ಸಹಕಾರಿ ಸಂಘಗಳ ವಿಧಗಳು, ಸಹಕಾರಿ ಚಳುವಳಿಯ ಪ್ರಯೋಜನಗಳು, ದೋಷಗಳು ಮತ್ತು ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿಯ ಪ್ರಗತಿ. ಇವುಗಳ ಕುರಿತು ಸಂಕ್ಷಿಪ್ತ ಮಾಹಿತಿಗಳನ್ನು ನೀಡಲಾಗಿದೆ.

ಮೂರನೇ ಅಧ್ಯಾಯವು ಮಂಗಳೂರು ತಾಲೂಕಿನ ಆಯ್ದ ೪ ಕೃಷಿ ವ್ಯವಸಾಯ ಬ್ಯಾಂಕು ಮತ್ತು ಸಂಘಗಳ ಪರಿಚಯ ಕ್ಷೇತ್ರ ಕಾರ್ಯದ ಮೂಲಕ ಪಡೆದುಕೊಂಡ ಮಾಹಿತಿ

ವಿಶ್ಲೇಷಣೆಗಳನ್ನೊಳಗೊಂಡಿದೆ. ಇಲ್ಲಿ ಬ್ಯಾಂಕಿನ ವಿವಿಧ ಚಟುವಟಿಕೆಗಳು, ಕೃಷಿ ಪ್ರಗತಿಯಲ್ಲಿ ಈ ಸಹಕಾರಿ ಬ್ಯಾಂಕುಗಳ ಪತ್ರಗಳ ಬಗ್ಗೆ ಪರಾಮರ್ಶೆಯನ್ನು ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯವು ನೇರವಾಗಿ ಸದಸ್ಯರ ಪಾಲ್ಗೊಳ್ಳುವಿಕೆಯ ಕುರಿತಾಗಿದೆ. ಇಲ್ಲಿ ಆಯ್ದ ಕೃಷಿ ಬ್ಯಾಂಕುಗಳ ಸದಸ್ಯರ ಮಾಹಿತಿಯನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಇದು ಕೃಷಿ ಬ್ಯಾಂಕಿನ ಸದಸ್ಯರ ವರ್ಷ, ಸದಸ್ಯರ ಉದ್ದೇಶ, ಅನುಭವ ಸದಸ್ಯರು ಹೆಚ್ಚು ಮಹತ್ವ ನೀಡುವ ವಿಷಯ ಮುಂತಾದ ಪ್ರಾಥಮಿಕ ಮಾಹಿತಿಯನ್ನೇ ಒಳಗೊಂಡಿದೆ. ಅಲ್ಲದೆ ಆಯ್ದ ೪ ಬ್ಯಾಂಕುಗಳ ಮತ್ತು ಸಂಘಗಳ ಕಾರ್ಯ ಚಟುವಡಿಕೆಗಳ ಕುರಿತು ವಿಶ್ಲೇಷಿಸಲಾಗಿದೆ.

ಐದನೇ ಅಧ್ಯಾಯವು ಅಧ್ಯಾಯನದ ಫಲಿತಗಳನ್ನೊಳಗೊಂಡಿದೆ. ಅಧ್ಯಯನದ ಫಲಿತಾಂಶ ಸಲಹೆ ಸೂಚನೆಗಳು ನೀತಿ ನಿರೂಪಣೆಯ ಮಹತ್ವ ಮತ್ತು ಸಂಕ್ಷಿಪ್ತ ಉಪಸಂಹಾರವನ್ನು ನೀಡಲಾಗಿದೆ.

**ಅಧ್ಯಯನದ ಇತಿಮಿತಿಗಳು:**

೧. "ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಸಹಕಾರಿ ಸಂಘ ಮತ್ತು ಬ್ಯಾಂಕುಗಳ ಪಾತ್ರ" ಎಂಬ ಅಧ್ಯಯನವನ್ನು ಮಂಗಳೂರು ತಾಲೂಕಿಗೆ ಸೀಮಿತಗೊಳಿಸಿದೆ.

೨. ಈ ಅಧ್ಯಯನದಲ್ಲಿ ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ಕಿನ್ನಿಗೋಳಿ, ಸುರತ್ಕಲ್, ಪಕ್ಷಿಕೆರೆ ಎಂಬ 4 ಬ್ಯಾಂಕುಗಳನ್ನು ಮತ್ತು ಕೆಲವು ವ್ಯವಸಾಯ ಸೇವಾಸಹಕಾರಿ ಸಂಘಗಳನ್ನು ಆಯ್ದುಕೊಂಡು ಅವುಗಳ ಕಾರ್ಯ ವೈಖರಿ ಸಂಘಟನಾತ್ಮಾಕ ಬೆಳವಣಿಗೆ ಮತ್ತು ಕೃಷಿಯ ಅಭಿವೃದ್ಧಿ ಯಾವ ರೀತಿಯನ್ನು ಪ್ರಗತಿ ಸಾಧಿಸಿದೆ ಎಂದು ಪರಾಮರ್ಶಿಸಲಾಗಿದೆ.

೩. ನಮ್ಮ ಅಧ್ಯಯನವು ಬ್ಯಾಂಕುಗಳ 3 ವರ್ಷಗಳ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಗಿದ್ದು ಬ್ಯಾಂಕುಗಳ ಪ್ರಾರಂಭದಿಂದ ಈ ವರೆಗಿನ ಚಟುವಟಿಕೆಗಳನ್ನು ಒಳಗೊಂಡಿರುದಿಲ್ಲ.

## ೧.೩: ಅಧ್ಯಯನದ ವಿಧಾನಗಳು:

❖ **ಪ್ರಾಥಮಿಕ ಮೂಲ:**

ಅಧ್ಯಯನಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಪ್ರಶ್ನಾವಳಿ, ಸಂದರ್ಶನ ಮತ್ತು ಸಂವಾದಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸುವುದು. ಪ್ರಸ್ತುತ ಅಧ್ಯಯನದಲ್ಲಿ ನಾಲ್ಕು ಸಹಕಾರಿ ಬ್ಯಾಂಕುಗಳು ಸಂದರ್ಶಿಸಲಾಗುವುದು ಹಾಗೆ ಐದು ಸಂಘಗಳಿಂದ ಮಾಹಿತಿ ಸಂಗ್ರಹಿಸಲಾಗುವುದು. 50 ಮಾಹಿತಿದಾರರಿಂದ ಸಂದರ್ಶನ ಮೂಲಕ ದತ್ತಾಂಶ ಸಂಗ್ರಹಿಸಲಾಗುವುದು.

❖ **ಉದ್ಧೇಶಿತ ಅನುಷಂಗಿಕ ಮೂಲ:**

ಪ್ರಕಟಿತ ಗ್ರಂಥಗಳು, ಪತ್ರಿಕೆ, ವರದಿಗಳ ಮುಖಾಂತ್ರ ಮಾಹಿತಿ ಸಂಗ್ರಹಿಸಲಾಗುವುದು.

## ೧.೭: ಸಾಹಿತ್ಯ ವಿಮರ್ಶೆ

ಅಧ್ಯಯನಕ್ಕೆ ಸಂಬಂಧಪಟ್ಟ ವಿವಿಧ ಗ್ರಂಥಗಳನ್ನು ಕೃತಿಗಳನ್ನು ಪತ್ರಿಕೆಗಳನ್ನು ವಿವಿಧ ಸಂಶೋಧನಾ ಅಧ್ಯಯನಗಳನ್ನು ಪರಿಶೀಲಿಸಲಾಗುವುದು

## ೧.೮: ಉಪಸಂಹಾರ

ಕೃಷಿಯು ಒಂದು ಮಹತ್ತರ ಸ್ಥಾನಮಾನವನ್ನು ಹೊಂದಿದೆ, ಜನರ ಜೀವನೋಪಾಯಕ್ಕೆ ಕೃಷಿಯು ಒಂದು ಕಸುಬಾಗಿ ಉಳಿದಿದೆ. ಆದುದರಿಂದ ಭಾರತವು ಇಂದಿಗೂ ಕೃಷಿ ಪ್ರಧಾನದೇಶವಾಗಿದೆಂದರೆ ತಪ್ಪಗಲಾರದು, ಆದುದರಿಂದ ಕೃಷಿಯ ಅಭಿವೃದ್ಧಿಗೆ ಕೃಷಿ ಸಹಕಾರಿ ಬ್ಯಾಂಕುಗಳ ಮತ್ತು ಸಂಘಗಳ ಪಾತ್ರ ಮುಖ್ಯವಾಗಿದೆ.

# ಅಧ್ಯಾಯ ೨

# ಸಹಕಾರದ ಅರ್ಥ ಮತ್ತು ವ್ಯಾಖ್ಯಾನ ಸಹಕಾರಿ ಸಂಘಗಳ ವಿಧಗಳು ಪ್ರಯೋಜನಗಳು ಮತ್ತು ದೋಷಗಳು

## ೨.೧ ಪೀಠಿಕೆ:

ಸಹಕಾರ ಎಂದರೆ ಜನರು ತಮ್ಮ ಸ್ವಾರ್ಥವನ್ನು ಮರೆತು ಒಗ್ಗೂಡಿ ಪರಸ್ಪರ ಹಿತಾಸಕ್ತಿಗಳನ್ನು ಕಾಪಾಡಲು ಸಾಂಘಿಕವಾಗಿ ಪ್ರಯತ್ನಿಸುವ ಒಂದು ವ್ಯವಸ್ಥೆಯಾಗಿದೆ. ತಮ್ಮ ಆರ್ಥಿಕ ಹಿತಾಸಕ್ತಿಗಳನ್ನು ಕಾಪಾಡಲು ಜನರು ಸಮಾನತೆಯ ಆಧಾರದ ಮೇಲೆ ಸ್ವ ಇಚ್ಚೆಯಿಂದ ಸಂಘಟಿತರಾಗುವುದೇ ಸಹಕಾರಿ ಸಂಘ. ತಾನು ಎಲ್ಲರಿಗಾಗಿ, ಎಲ್ಲರು ತನಗಾಗಿ ಎಂಬುವುದು ಸಹಕಾರದ ಮೂಲ ತತ್ವವಾಗಿದೆ. ಸಹಕಾರ ಅಂದರೆ ಒಬ್ಬರಿಗೊಬ್ಬರು ಕೈಸೇರಿಸಿ ನಡೆಸುವುದು ಎಂದು ಹೇಳಿದರೆ ತಪ್ಪಾಗಲಾರದು. (ಎಚ್. ಆರ್. ಕೃಷ್ಣಮೂರ್ತಿ, (2012), ಕರ್ನಾಟಕ ಆರ್ಥಿಕತೆ)

ವಿಶ್ವ ನಿರ್ಮಾಣದ ಸಾರ್ವತ್ರಿಕ ಸಾಧನವೇ ಸಹಕಾರ. ಸಹಕಾರ ಎಂಬುವುದು ಒಂದು ಜಾಗತಿಕ ಲಕ್ಷಣ. ಸಹಕಾರ ಅಂದರೆ ಒಬ್ಬರಿಗೊಬ್ಬರು ಕೈಸೇರಿಸಿ ನಡೆಸುವುದು ಎಂದು ಹೇಳಿದರೆ ತಪ್ಪಾಗಲಾರದು. ಸ್ವತಂತ್ರ ಭಾರತದ ಗ್ರಾಮೀಣ ಅಭಿವೃದ್ದಿಗೆ ಬಹುದೊಡ್ಡ ಪ್ರೇರಕಶಕ್ತಿಯಾಗಿ ಬಲಿಷ್ಠ ಡಾವಿಯಾಗಿ ದೊರೆತದ್ದು ಸಹಕಾರಿ ರಂಗ. ಕರಾವಳಿಯಲ್ಲಿ ಸಹಕಾರಿ ಪಿತಾಮಹ ಮೊಳಹಳ್ಳಿ ಶಿವರಾಯರ ಅವಿರತ ಪ್ರಯತ್ನ, ಸಾಧನೆ ದೂರದೃಷ್ಟಿ, ಶ್ರಮ ಸಹಕಾರಿ ರಂಗವನ್ನು ಸದೃಡಗೊಲಿಸುತ್ತಾ ಹೆಮ್ಮೆಯ ಗೌರವದ ಪ್ರತೀಕವಾಗಿದೆ. ಈ ಸಹಕಾರಿ ರಂಗ ಕಾಲಕಾಲಕ್ಕೆ ಹೊಸ ಯೋಜನೆಗಳನ್ನು ಹೆಣೆಯುತ್ತ ಗ್ರಾಮೀಣ ಜನತೆಯಲ್ಲಿ, ಅದರಲ್ಲೂ ಪ್ರಸ್ತುತ ಮಹಿಳೆಯರಲ್ಲಿ ಆರ್ಥಿಕ ಚೈತನ್ಯ, ಆತ್ಮವಿಶ್ವಾಸ ಮತ್ತು ಮಾನಸಿಕ ಕ್ಷಮತೆಯ ಬೆಳಕನ್ನು ಬೀರುತ್ತದೆ.

## ೨.೨ ಸಹಕಾರಿ ಸಂಘಗಳ ಉದಯ:-

ಭಾರತದ ಇತಿಹಾಸ ಮೇಲುಕು ಹಾಕಿದರೆ, ಪುರಾತನ ಕಾಲವಿಂದಲೂ ಸಹಕಾರವಿತ್ತು ಅದು ಸಂಘ ಸಂಸ್ಥೆಯೆಂದು ಹೇಳಲು ಬರುವುದಿಲ್ಲವಾದರೂ ಎಲ್ಲರೂ ಸೇರಿ ಮಾಡಿದ ಕೆಲಸವಾಗಿರುತ್ತದೆ. ನಮ್ಮ ಜಿಲ್ಲೆಗಳಲ್ಲಿ ಅಳಿದುಳಿದ ಕಟ್ಟೆಗಳು, ಮಠಗಳು, ರಾಜಮಾರ್ಗಗಳು, ಕೆರೆಗಳು, ಸಾರ್ವಜನಿಕ ಬಾವಿಗಳು ಇತ್ಯಾದಿಗಳನ್ನು ತೆಗೆದುಕೊಂಡರೆ ರಾಜಮಹಾರಾಜರ ಕಾಲದಲ್ಲಿ ಜನಪರ ಕೆಲಸಗಳನ್ನು ಮಾಡಿಸುವರೆ ಅವರ ಅಧೀನದಲ್ಲಿರುವ ಹಿಡುವಳಿಗಾರರಿಗೆ ಅವನು ಇಳುವರಿ ಮಾಡುವ ಭೂಮಿಗನು ಸಾರವಾಗಿ ವಸ್ತು ರೂಪದಲ್ಲಿ ಆಳುಕಾಳುಗಳ

ರೂಪದಲ್ಲಿ ದೇಣಿಗೆ ಕೊಡಬೇಕೆಂದು ಸಾರಿ ಆಯಾ ಊರಿಗೆ ಬೇಕಾದ ಪ್ರಯಾಣಿಕರು ತಂಗುವ ಕಟ್ಟೆಗಳು, ರಾಜಕಾರಣಿಗಳು, ರಸ್ತೆ ಬದಿಯಲ್ಲಿ ಮರಗಳು, ಕೆರೆಗಳನ್ನು, ಮಠಗಳನ್ನು ನಿರ್ಮಿಸಿದ್ದರು. ಈ ಕಾರ್ಯಗಳಿಗೆ ರಾಜನೇ ಅಥವಾ ಆಯ ಊರಿನ ಮುಖ್ಯರೇ ಪ್ರಮುಖರಾಗಿದ್ದರು ಎಂಬುವುದಕ್ಕೆ ಎರಡು ಮಾತಿಲ್ಲ.

**೨.೩ ಸಹಕಾರಿ ಕೃಷಿ ಪದ್ಧತಿ:-**

ಹಿಂದೆ ಮಗಣೆ, ಸೀಮೆ ಇತ್ಯಾದಿಗಳಿದ್ದವೆಂದು, ಹಲವು ಊರುಗಳು ಸೇರಿ ಸೀಮೆಯಾಯಿತೆಂದು, ಹಲವು ಸೀಮೆಗಳು ಸೇರಿ ಮಾಗಣೆಯಾಯಿತೆಂದು ಹೇಳುತ್ತಾರೆ. ಆಗ ಹೆಚ್ಚಿನವರು ಕೃಷಿಕರಾಗಿದ್ದು, ಹಲವು ಕೃಷಿಕರಿಗೆ ಹಲವು ರೀತಿಯ ತೊಂದರೆಗಳು ಕೃಷಿಗೆ ಬೇಕಾಗುವ ಎತ್ತು, ಬೀಜ ಇತ್ಯಾದಿಗಳು ಇರುತ್ತಿರಲಿಲ್ಲ. ಆಗ ಊರವರು ಸೇರಿ ಒಂದು ಮೂಲೆಯಿಂದ ಇನ್ನೊಂದು ಮೂಲೆಯವರೆಗೆ ಪ್ರತಿಯೊಂದು ಗದ್ದೆಗಳನ್ನು ಮಾಡುತ್ತಿದ್ದರೆಂದು ಹೇಳುತ್ತಾರೆ.

ಅವಿಭಜಿತ ದ.ಕ ಜಿಲ್ಲೆಯನ್ನು ಗಮನಿಸಿದಾಗ ಸಹಕಾರಿ ಕೃಷಿ ಪದ್ದತಿಯ ಕಾಲದಲ್ಲಿಯೇ ಸಹಕಾರಿ ಸಂಘಗಳೂ ಚಿಕ್ಕಮಟ್ಟಿಗೆ ಸ್ಥಾಪಿತವಾಗಿರಬಹುದು. ಆಗ ರೈತ ಬಡವನಾಗಿದ್ದ, ಅವನಿಗೆ ಬೇಕು ಬೇಡವಾದ ವಿಚಾರಗಳಿಗೆ ಹಣವನ್ನು ಸಾಲದ ರೂಪದಲ್ಲಿ ಪಡೆಯುತ್ತಿದ್ದ. ಸಾಲ ಪಡೆಯುವಾಗ ಅವನ ಅದೀನದಲ್ಲಿದ್ದ ಹೊಲಗದ್ದೆಗಳನ್ನು ಅಡವಾಗಿಡುತ್ತಿದ್ದ. ಸಾಲ ಪಡೆದ ಹಣವನ್ನು ಪಾವತಿಸಲಾಗದವನ ಹೊಲ, ಗದ್ದೆ, ಮನೆ, ಮರವನ್ನೆಲ್ಲಾ ಸಾಲ ಕೊಟ್ಟವನು ದರ ಮಾಡುತ್ತಿದ್ದ. ಇದನ್ನು ನೋಡಿ ಬುದ್ದಿ ಜೀವಿಗಳು ಸೇರಿ ಎಲ್ಲರೂ ನಮಗಾಗಿ ನಾವು ಎಲ್ಲರಿಗಾಗಿ ಎಂಬ ನಾಲ್ನುಡಿಯನ್ನು ಮುಂದಟ್ಟುಕೊಂಡು ಒಂದಿಷ್ಟು ಬಂಡವಾಳವನ್ನು ಸಂಗ್ರಹಿಸಿ ರೈತನಿಗೆ ಬೇಕಾಗುವ ಸಾಲಸೋಲಗಳನ್ನು ಒಂದು ನಿರ್ದಿಷ್ಟ ಬಡ್ಡಿಯಲ್ಲಿ ಕೊಟ್ಟ ಅವನು ಉತ್ಪಾದಿಸುವ ಕೃಷಿ ವಸ್ತುಗಳನ್ನು ಪಡೆದು ಮಾರಿ ಅದರಲ್ಲಿ ಒಂದಂಶವನ್ನು ಅವನ ಸಾಲದ ಬಾಬ್ತು ಕಳೆದು ಉಳಿದ ಹಣವನ್ನು ಅವರಿಗೆ (ಕೃಷಿಕರಿಗೆ) ಕೊಟ್ಟು ಸಹಕರಿಸುತ್ತಿದ್ದರು. ಕ್ರಮೇಣ ಅದನ್ನು ಶಾಸ್ತ್ರ ಬದ್ಧನಾಗಿ ನಡೆಸುವಂತೆ ಮಾಡುವರೆ ಸುಧಾರಣೆಗಳನ್ನು ತಂದು ಈಗಿನ ಸಹಕಾರಿ ಸಂಸ್ಥೆಗಳಾದವು. ಈಗ ರೈತನಿಗೆ ಬೇಕಾದ ಬೀಜಗಳು ರಾಸಾಯನಿಕ ಗೊಬ್ಬರಗಳು ಕೀಟನಾಶಕಗಳು, ನೀರು ಹಾಯಿಸುವ ಯಂತ್ರ, ಉಳುವ ಯಂತ್ರ, ಸಿಂಪಡಿಸುವ ಯಂತ್ರ, ವಾಹನಗಳು ಇತ್ಯಾದಿಗಳಿಗೆ, ಸಾಲ ಕೊಡುವಷ್ಟು ಮುಂದುವರಿದಿದೆ. ಮುಂಬೈಯಂತಹ ಮಹಾನಗರಗಳಲ್ಲಿ ವಸತಿ ಸಮುಚ್ಚಾಯಗಳು ಸಹಕಾರಿ ಪದ್ಧತಿಯಲ್ಲಿ ನಡೆಯುತ್ತಿದೆ. ದ.ಕ ಜಿಲ್ಲೆಯಲ್ಲಿ ಈಗ ಪ್ರಚಲಿತವಾಗಿರುವ ಸ್ತ್ರೀ ಶಕ್ತಿ ಸಂಘಗಳು ೨೦ ನೇ ಶತಮಾನದ ಮಾದರಿ

ಸಹಕಾರಿ ಸಂಘಗಳು, ಆದುದರಿಂದ ತಾನು ಎಲ್ಲರಿಗಾಗಿ ಎಲ್ಲರೂ ತನಗಾಗಿ ಎಂಬ ಮಾತು ನಿಜಕ್ಕೂ ಸತ್ಯವಾಗಿದೆ.

**ಲಕ್ಷಣಗಳು:**

೧. ಸ್ವಯಂ ಪ್ರೇರಣೆಯ ಸಂಘಟನೆ

೨. ಮುಕ್ತ ಸದಸ್ಯತ್ವ

೩. ಪ್ರಜಾಪ್ರಭುತ್ವ ಸಂಸ್ಥೆ ಹಾಗು ಒಬ್ಬನಿಗೆ ಒಂದೇ ಓಟು

೪. ಐಚ್ಚಿಕ ಸದಸ್ಯತ್ವ

೫. ಸ್ವಸಹಾಯ ಮತ್ತು ಪರಸ್ಪರ ಸಹಾಯ

೬. ಸೇವೆಯೇ ಮುಖ್ಯ ಗುರಿ, ಲಾಭಗಳಿಕೆ ಗೌಣ

೭. ಲಾಭದ ನ್ಯಾಯವಾದ ಹಂಚಿಕೆ

೮. ಸರ್ಕಾರದ ಹತೋಟಿಯಿರುತ್ತದೆ

**ಸಹಕಾರಿ ಸಂಘಗಳ ವಿಧಗಳು:–**

ಕರ್ನಾಟಕದಲ್ಲಿ ಸಹಕಾರಿ ಚಳುವಳಿಯು ಮೂರು ಹಂತದ ಸಂಘಟನೆಯನ್ನು ಹೊಂದಿದೆ. ಕೆಳ ಮಟ್ಟದಲ್ಲಿ ಪ್ರಾಥಮಿಕ ಪತ್ತಿನ ಸಂಘಗಳಿದ್ದರೆ ಮೇಲ್ಮಟ್ಟದಲ್ಲಿ ರಾಜ್ಯ ಸಹಕಾರಿ ಬ್ಯಾಂಕ್ ಇದೆ. ಇವೆರಡರ ನಡುವೆ ಕೇಂದ್ರ ಸಹಕಾರಿ ಬ್ಯಾಂಕುಗಳಿವೆ. ರಾಜ್ಯದಲ್ಲಿರುವ ಸಹಕಾರಿ ಸಂಘಗಳನ್ನು ಒಟ್ಟಾರೆಯಾಗಿ

(ಅ) ಸಹಕಾರಿ ಪತ್ತಿನ ಸಂಘಗಳು ಮತ್ತು

(ಆ) ಇತರೆ ಸಹಕಾರಿ ಸಂಘಗಳು

**(ಅ) ಸಹಕಾರಿ ಪತ್ತಿನ ಸಂಘಗಳು:–**

ಸಹಕಾರಿ ಪತ್ತಿನ ಸಂಘಗಳು ವಿವಿಧ ಉದ್ದೇಶಗಳಿಗೆ ಸಾಲ ನೀಡುವ ಸಹಕಾರಿ ಸಂಘಗಳಾಗಿವೆ. ಇವುಗಳಲ್ಲಿ

*ಕೃಷಿ ಪತ್ತಿನ ಸಂಘಗಳು

* ಕೃಷಿಯೇತ್ತರ ಪತ್ತಿನ ಸಂಘಗಳು

**ಕೃಷಿ ಪತ್ತಿನ ಸಂಘಗಳು:–**

ಕೃಷಿಗೆ ಮಾತ್ರ ಸಾಲವನ್ನು ಪೂರೈಸುತ್ತಿರುವ ಸಂಘಗಳನ್ನು ಕೃಷಿ ಪತ್ತಿನ ಸಹಕಾರ ಸಂಘಗಳೆಂದು ಕರೆಯಲಾಗುತ್ತದೆ.

ಕೃಷಿಗೆ ಸಾಲ ನೀಡುವ ಸಹಕಾರ ಸಂಘಗಳಲ್ಲಿ

(ಅ) ಅಲ್ಪಾವಧಿ ಸಾಲ ನೀಡುವ ಸಂಘಗಳು

(ಆ) ದೀರ್ಘಾವಧಿ ಸಾಲ ನೀಡುವ ಸಂಘಗಳು

**(ಅ) ಅಲ್ಪಾವಧಿ ಕೃಷಿ ಪತ್ತಿನ ಸಂಘಗಳು:–**

ಕರ್ನಾಟಕದಲ್ಲಿ ಅಲ್ಪಾವಧಿ ಕೃಷಿ ಪತ್ತಿನ ಸಂಘಗಳು ಮೂರು ಹಂತಗಳಲ್ಲಿ ಸಂಘಟಿಸಲ್ಪಟ್ಟಿವೆ. ಗ್ರಾಮ ಮಟ್ಟದಲ್ಲಿ ಪ್ರಾಥಮಿಕ ಸಹಕಾರಿ ಸಂಘಗಳು, ರಾಜ್ಯ ಮಟ್ಟದಲ್ಲಿ ರಾಜ್ಯ ಸಹಕಾರಿ ಆಪೆಕ್ಸ್ ಬ್ಯಾಂಕು ಮತ್ತು ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರಿ ಬ್ಯಾಂಕು.

**ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳು:–**

ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳನ್ನು ಯಾವುದೇ ಗ್ರಾಮಕ್ಕೆ ಸೇರಿದ ೧೦ ಅಥವಾ ಅದಕ್ಕಿಂತ ಹೆಚ್ಚಿನ ಜನರು ಸೇರಿ ಸ್ಥಾಪಿಸಬಹುದಾಗಿದೆ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಸಾಲ ಸೌಲಭ್ಯ ನೀಡಲು ನಬಾರ್ಡನಿಂದ ನೆರವು ಪಡೆಯುತ್ತದೆ.

**(ಆ) ಕೃಷಿಯೇತರ ಪತ್ತಿನ ಸಂಘಗಳು:–**

ಕೃಷಿಯೇತರ ಉದ್ದೇಶಗಳಿಗೆ ಸಾಲ ನೀಡುವ ಸಂಘಗಳನ್ನು ಕೃಷಿಯೇತರ ಪತ್ತಿನ ಸಂಘಗಳು ಎಂದು ಕರೆಯುತ್ತೇವೆ. ಕೃಷಿಯೇತರ ಪತ್ತಿನ ಸಂಘಗಳನ್ನು ಸಾಮಾನ್ಯವಾಗಿ ಕೃಷಿಯಲ್ಲಿ ಹೊರತುಪಡಿಸಿ ಇತರೆ ಕ್ಷೇತ್ರಗಳಲ್ಲಿ ವೃತ್ತಿನಿರತರಾದವರು ಸ್ಥಾಪಿಸುತ್ತಾರೆ.

- **ನಗರ ಸಹಕಾರಿ ಬ್ಯಾಂಕುಗಳು:–**

ನಗರ ಸಹಕಾರಿ ಬ್ಯಾಂಕುಗಳು ಹೆಚ್ಚಾಗಿ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಸ್ಥಾಪಿಸಲ್ಪಟ್ಟಿವೆ. ಇವು ವಾಣಿಜ್ಯ ಬ್ಯಾಂಕುಗಳ ಕಾರ್ಯಗಳನ್ನು ನಿರ್ವಹಿಸುತ್ತಿವೆ. ಸಾರ್ವಜನಿಕರಿಂದ ಠೇವಣಿ ಸ್ವೀಕರಿಸುತ್ತವೆ ಹಾಗು ಅಗತ್ಯವಿರುವವರಿಗೆ ಸಾಲ ನೀಡುತ್ತೇವೆ

- **ನೌಕರರ ಸಹಕಾರಿ ಪತ್ತಿನ ಸಂಘಗಳು:–**

ನೌಕರರ ಸಂಘಗಳನ್ನು ಕಚೇರಿ ಸಂಸ್ಥೆ ಮತ್ತು ಕಾರ್ಖಾನೆಗಳಲ್ಲಿನ ನೌಕರರು ಸ್ಥಾಪಿಸುತ್ತಾರೆ. ಅವುಗಳ ಸದಸ್ಯತ್ವ ಕೇವಲ ಸಂಬಂಧಪಟ್ಟ ನೌಕರರಿಗೆ ಮಾತ್ರ ಲಭ್ಯವಿರುತ್ತದೆ. ಠೇವಣಿಗಳನ್ನು ಸ್ವೀಕರುತ್ತವೆ ಹಾಗು ಸದಸ್ಯರಿಗೆ ಸಾಲ ನೀಡುತ್ತವೆ.

- **ಇತರ ಸಹಕಾರಿ ಸಂಘಗಳು :–**

*** ಕೃಷಿ ಪತ್ತೇತರ ಸಹಕಾರಿ ಸಂಘಗಳು:**

ಕೃಷಿ ಪತ್ತೇತರ ಸಹಕಾರಿ ಸಂಘಗಳು ಕೃಷಿ ಕ್ಷೇತ್ರದಲ್ಲಿ ಮಾರಾಟ, ಸಂಸ್ಕರಣೆ ಉತ್ಪಾದನೆ,

ವ್ಯಾಪಾರ ಮುಂತಾದ ಕ್ಷೇತ್ರಗಳಲ್ಲಿ ಸ್ಥಾಪಿಸಲ್ಪಟ್ಟ ಸಹಕಾರ ಸಂಘಗಳಾಗಿವೆ. ಉದಾಹರಣೆಗೆ ಸಹಕಾರಿ ಬೇಸಾಯ ಸಂಘಗಳು, ವಿವಿಧೋದ್ದೇಶ ಸಹಕಾರಸಂಘ, ರೈತ ಸೇವ ಸಹಕಾರಿಸಂಘ ಮುಂತಾದವು.

*** ಕೃಷಿಯೇತರ ಸಾಲ ನೀಡದ ಸಹಕಾರ ಸಂಘಗಳು:**

ಇಂತಹ ಸಹಕಾರ ಸಂಘಗಳನ್ನು ಕೃಷಿಯೇತರ ಕ್ಷೇತ್ರಗಳಾದ ವ್ಯಾಪಾರ, ಕೈಗಾರಿಕೆ, ಶಿಕ್ಷಣ ಆರೋಗ್ಯ, ಗ್ರಹ ನಿರ್ಮಾಣ ಮುಂತಾದ ಕ್ಷೇತ್ರಗಳಲ್ಲಿ ಸ್ಥಾಪಿಸಲಾಗುತ್ತದೆ. ಇಂತಹ ಸಂಘಗಳ ಉದಾಹರಣೆಗಳೆಂದರೆ ೧) ಗ್ರಹ ನಿರ್ಮಾಣ ೨) ಬಳಕೆದಾರರ ಸಂಘ ೩) ಉದ್ಪಾದಕರ ಸಂಘ ೪) ಕೈಗಾರಿಕಾ ಸಂಘ ೫) ನೌಕರರ ಸಮಘ ಮುಂತಾದವು.

ಸದಸ್ಯರು ಅಪರಿಮಿತ ಹೊಣೆಗಾರಿಕೆ ಹೊಂದಿರುತ್ತಾರೆ. ಈ ಸಂಘಗಳು ಸದಸ್ಯರಿಗೆ ಕಡಿಮೆ ಬಡ್ಡಿ ದರದಲ್ಲಿ ಅಲ್ಪಾವಧಿ ಸಾಲ ನೀಡುತ್ತವೆ.

**ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು:–**

ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕುಗಳು ಜಿಲ್ಲಾಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಇವು ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು ಮತ್ತು ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳ ನಡುವೆ ಮಧ್ಯವರ್ತಿಗಳಾಗಿರುತ್ತವೆ. ಈ ಬ್ಯಾಂಕುಗಳು ಸರ್ವಜನಿಕರಿಂದ ಠೇವಣಿ ಸ್ವೀಕರಿಸುತ್ತವೆ ಹಾಗು ಜಿಲ್ಲೆಯ ವಿವಿಧ ಕೇಂದ್ರಗಳಲ್ಲಿ ಶಖೆಗಳನ್ನು ತೆರೆಯುತ್ತವೆ. ಕೇಂದ್ರ ಸಹಕಾರಿ ಬ್ಯಾಂಕುಗಳು ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ಸಾಲ ಪಡೆದು ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳಿಗೆ ಸಾಲ ನೀಡುತ್ತವೆ.

**ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕು:–**

ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕು ರಾಜ್ಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತದೆ. ಈ ಬ್ಯಾಂಕು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಿಗೆ ಸಾಲ ನೀಡುತ್ತದೆ ಹಾಗು ಅವುಗಳನ್ನು ನಿಯಂತ್ರಿಸುತ್ತದೆ. ಇದು ನಬಾರ್ಡ ಮತ್ತು ರಾಜ್ಯ ಸರ್ಕಾರಗಳಿಂದ ಹಣ ಪಡೆಯುತ್ತದೆ.

**ದೀರ್ಘಾವಧಿ ಕೃಷಿ ಪತ್ತಿನ ಸಂಘಗಳು:–**

ಕೃಷಿಗೆ ಅಗತ್ಯವಿರುವ ದೀರ್ಘಾವಧಿ ಹಣಕಾಸನ್ನು ಪೂರೈಸುವ ಸಂಘಗಳನ್ನು ದೀರ್ಘಾವಧಿ ಕೃಷಿ ಪತ್ತಿನ ಸಂಘಗಳು ಎಂದು ಕರೆಯಲಾಗುತ್ತದೆ. ರಾಜ್ಯದಲ್ಲಿ ಇಂತಹ ಎರಡು ರೀತಿಯ ಸಂಘಗಳಿವೆ. ಅವುಗಳೆಂದರೆ;

*** ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು:–**

ರಾಜ್ಯದಲ್ಲಿ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳನ್ನು ಪ್ರತೀ ತಾಲ್ಲೂಕು ಕೇಂದ್ರಗಳಲ್ಲಿ ಸ್ಥಾಪಿಸಲಾಗಿದೆ. ಇವು ಕೃಷಿಗೆ ಬೇಕಾಗುವ ದೀರ್ಘಾವಧಿ ಸಾಲಗಳನ್ನು ನೀಡುತ್ತದೆ ಮುಖ್ಯವಾಗಿ ಭೂ ಅಭಿವೃದ್ಧಿ, ಕೃಷಿಸಲಕರಣೆಗಳನ್ನುಕೊಳ್ಳಲು, ಬಾವಿ ತೋಡಲು, ಹಳೆಯ ಸಾಲವನ್ನು ತೀರಿಸಲು ಮುಂತಾದ ಉದ್ದೇಶಗಳಿಗೆ ಸಾಲ ನೀಡುತ್ತವೆ. ಸಾಮಾನ್ಯವಾಗಿ ಭೂಮಿಯನ್ನು ಅಧಾದವಿಟ್ಟುಕೊಂಡು ಸಾಲ ನೀಡುತ್ತೇವೆ. ಹಿಂದೆ ಈ ಬ್ಯಾಂಕುಗಳನ್ನು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಅಥವಾ ಅಡಮಾನ ಬ್ಯಾಂಕುಗಳೆಂದು ಕರೆಯಲಾಗುತ್ತಿತ್ತು.

*** ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಭಿವೃದ್ಧಿ ಬ್ಯಾಂಕು:–**

ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ರಾಜ್ಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತದೆ ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳನ್ನು ನಿಯಂತ್ರಿಸುತ್ತದೆ. ಕರ್ನಾಟಕ ರಾಜ್ಯ ಸಹಕಾರಿ ಕೃಷಿ.

**ಸಹಕಾರಿ ಚಳುವಳಿಯ ಗುಣಗಳು ಅಥವಾ ಪ್ರಯೋಜನಗಳು:–**

**೧. ಸುಲಭ ಸಾಲ ಸೌಲಭ್ಯ:–**

ಸಹಕಾರಿ ಸಂಘಗಳು ಸದಸ್ಯರಿಗೆ ಅಗ್ಗದ ಬಡ್ಡಿ ದರದಲ್ಲಿ ಸುಲಭ ವಿಧಿವಿಧಾನಗಳಲ್ಲಿ ಹಣಕಾಸು ಪೂರೈಸುತ್ತಿವೆ. ಇದರಿಂದಾಗಿ ರೈತರು ಮತ್ತು ಗ್ರಾಮೀಣ ಜನರು ಹಣದ ಲೇವಾದೇವಿಗಾರರ ಶೋಷಣೆಗೆ ತುತ್ತಾಗುವುದು ಕಡಿಮೆಯಾಗಿದೆ.

**೨. ಉಳಿತಾಯ ಪ್ರವೃತಿ:–**

ಸಹಕಾರಿ ಸಂಘಗಳು ರೈತರಲ್ಲಿ ಉಳಿತಾಯ ಮನೋಭಾವನೆಯನ್ನು ಬೆಳೆಸಿವೆ.

**೩. ಸುಧಾರಿತ ಕೃಷಿ ಪದ್ಧತಿಗಳು:–**

ಸಹಕಾರಿ ಸಂಘಗಳು, ಕೃಷಿ ಕ್ಷೇತ್ರಕ್ಕೆ ಆಧುನಿಕ ಯಂತ್ರಗಳು, ಸಲಕರಣೆಗಳು, ಬಿತ್ತನೆಬೀಜಗಳು ರಸಗೊಬ್ಬರಗಳು, ಕ್ರಿಮಿನಾಶಕಗಳು ಮುಂತಾದವುಗಳನ್ನು ಪೂರೈಕೆ ಆಡುವುದರ ಮೂಲಕ ಕೃಷಿಯಲ್ಲಿ ಸುಧಾರಿತ ಕೃಷಿ ಪದ್ಧತಿಯನ್ನು ಜಾರಿಗೆಗೊಳಿಸಲು ಕಾರಣವಾಗಿದೆ. ಹೊಸ ಸಾಗುವಾಳಿ ಪದ್ಧತಿಗಳನ್ನು ರೂಢಿಸಿಕೊಳ್ಳಲು ಸಹಕಾರಿ ಚಳುವಳಿ ನೆರವಾಗಿದೆ.

**೪. ಅಧಿಕ ಉತ್ಪಾದನೆ:–**

ಸಹಕಾರಿ ಸಂಘಗಳು ಕೃಷಿಗೆ ಅತ್ಯಾಧುನಿಕ ಯಂತ್ರಗಳು ಮತ್ತು ಇತರೆ ಪರಿಕರಣಗಳನ್ನು ಪೂರೈಸುವುದರ ಮೂಲಕ ಕೃಷಿ ಉತ್ಪಾದನೆ ಹೆಚ್ಚುವಂತೆ ಮಾಡಿವೆ. ಇದರಿಂದಾಗಿ ಕೃಷಿಕರ

ಜೀವನಮಟ್ಟ ಸುಧಾರಿಸುತ್ತದೆ.

**೫. ಆಡಳಿತ ತರಬೇತಿ:–**

ಜನರು ತಾವೇ ಸಹಕಾರಿ ಸಂಘಗಳ ನಿರ್ವಹಣೆ ಮತ್ತು ನಿಯಂತ್ರಣ ಮಾಡುವುದರ ಮೂಲಕ ಸಂಘಟನೆಗಳ ನಿರ್ವಹಣೆ ವಿಷಯದಲ್ಲಿ ಸೂಕ್ತ ತರಬೇತಿ ಮತ್ತು ಅನುಭವ ಪಡೆಯುತ್ತಾರೆ. ಇದರಿಂದಾಗಿ ಅವರು ಬೇರೆ ಸಂಘಟಣೆಗಳ ಆಡಳಿತ ನಡೆಸುವುದು ಸುಲಭವಾಗುತ್ತದೆ.

**೬. ಯೋಗ್ಯ ಬೆಲೆ:–**

ಸಹಕಾರಿ ಸಂಘಗಳ ರೈತರು ಬೆಳೆದ ಬೆಳೆಗಳಿಗೆ ಯೋಗ್ಯ ಬೆಲೆ ಪಡೆಯುವುದನ್ನು ಸಾಧ್ಯಗೊಳಿಸಿವೆ. ಸಹಕಾರಿ ಮಾರಾಟ ಸಂಘಗಳ ಮೂಲಕ ರೈತರು ತಮ್ಮ ಬೆಳೆಗಳನ್ನು ಯಾವುದೇ ಕಿರುಕುಳ ಮತ್ತು ಶೋಷಣೆ ಇಲ್ಲದೇ ಮಾರಾಟ ಮಾಡಲು ವ್ಯವಸ್ಥೆ ಮಾಡಿವೆ.

**೭. ಸಾಮಾಜಿಕ ಲಾಭಗಳು:–**

ಸಹಕಾರಿ ಸಂಘಗಳು ಅನೇಕ ಸಾಮಾಜಿಕ ಸೇವೆಗಳನ್ನು ಸಲ್ಲಿಸುತ್ತಿವೆ. ಶಿಕ್ಷಣ ಪ್ರಸಾರ ಆರೋಗ್ಯ ಮತ್ತು ನೈರ್ಮಲ್ಯ ಸೌಲಭ್ಯಗಳ ಪೂರೈಕೆ ಮುಂತಾದ ಸೌಲಭ್ಯಗಳನ್ನು ಪೂರೈಸುತ್ತಿವೆ. ಇದರಿಂದಾಗಿ ಸಾಮಾಜಿಕ ಪರಿಸರ ಉತ್ತಮಗೊಳ್ಳುತ್ತಿದೆ.

**ಸಹಕಾರಿ ಚಳುವಳಿಯ ದೋಷಗಳು:–**

**೧. ಬಂಡವಾಳದ ಕೊರತೆ:–**

ರಾಜ್ಯದಲ್ಲಿ ಸಹಕಾರಿ ಸಂಘಗಳು ಬಂಡವಾಳದ ಕೊರತೆಯ ಸಮಸ್ಯೆಯನ್ನು ಎದುರಿಸುತ್ತದೆ. ಇದರಿಂದಾಗಿ ಅವು ಸದಸ್ಯರಿಗೆ ಅಗತ್ಯ ಹಣಕಾಸನ್ನು ಪೂರೈಸುವುದು ಸಾದ್ಯವಾಗಿಲ್ಲ

**೨. ತರಬೇತಿ ಅಭಾವ:–**

ಸಹಕಾರಿ ಸಂಘಗಳ ಸದಸ್ಯರು ಮತ್ತು ಆಡಳಿತಗಾರರಿಗೆ ಸೂಕ್ತ ತರಬೇತಿ ಅಭಾವವಿದೆ. ಇದರಿಂದಾಗಿ ಸಹಕಾರಿ ಸಂಸ್ಥೆಗಳ ದಕ್ಷ ನಿರ್ವಹಣೆ ಸಾಧ್ಯವಾಗುತ್ತಿಲ್ಲ.

**೩. ಅರಿವಿನ ಅಭಾವ:–**

ಸಹಕಾರಿ ಸಂಘಗಳ ಸದಸ್ಯರಲ್ಲಿ ಅರಿವಿನ ಅಭಾವವಿದೆ. ಅವರು ಸಹಕಾರಿ ತತ್ವದ ಅರ್ಥವನ್ನಾಗಲೀ ಅದರ ಪ್ರಯೋಜನವನ್ನಾಗಲೀ ಅರ್ಥ ಮಾಡಿಕೊಂಡಿಲ್ಲ. ಇದರಿಂದಾಗಿ ಸಹಕಾರಿ ಚಳುವಳಿಗೆ ಸೋಲುಂಟಾಗಿದೆ.

**೪. ಜನಪ್ರಿಯವಾಗಿಲ್ಲ:-**

ನಮ್ಮಲ್ಲಿ ಸಹಕಾರಿ ಚಳುವಳಿ ಆರಂಭವಾಗಿ ಒಂದು ಶತಮಾನವೇ ಕಳೆಯುತ್ತ ಬಂದಿದ್ದರೂ ಸಹ ಸಹಕಾರಿ ಸಂಸ್ಥೆಗಳು ಅಷ್ಟೊಂದು ಜನಪ್ರಿಯವಾಗಿಲ್ಲ. ಜನರು ಸಹಕಾರಿ ಚಳುವಳಿಯ ಯಶಸ್ವಿಗೆ ಶ್ರಮಿಸುತ್ತಿಲ್ಲ.

ಹೀಗೆ ರಾಜ್ಯದಲ್ಲಿ ಸಹಕಾರಿ ಚಳುವಳಿ ಅನೇಕ ನ್ಯೂನತೆಗಳನ್ನು ಹೊಂದಿದ್ದು ಅವುಗಳ ನಿವಾರಣೆಗೆ ಪ್ರಯತ್ನ ನಡೆಸಬೇಕಿದೆ. ಸಹಕಾರಿ ಸಂಘಗಳಲ್ಲಿ ರಾಜಕೀಯ ಹಸ್ತಕ್ಷೇಪವನ್ನು ಕಡಿಮೆಗೊಳಿಸಿ ರೈತರಿಗೆ ಅಗತ್ಯವಿರುವಷ್ಟು ಸಾಲವನ್ನು ಸಕಾಲದಲ್ಲಿ ಪೂರೈಸಲು ಮುಂದಾಗಬೇಕಿದೆ. ಅಲ್ಲದೆ ಸಹಾರಿ ಸಂಘಗಳು ಸಾಲ ನೀಡಿಕೆಯ ಜೊತೆಗೆ ಇತರೆ ಚಟುವಟಿಕೆಗಳಲ್ಲೂ ಭಾಗವಹಿಸಬೇಕು. ಸಹಕಾರಿ ಸಮಸ್ಥೆಗಳ ಸದಸ್ಯರಿಗೆ ಸೂಕ್ತ ತರಬೇತಿ ನೀಡಬೇಕು. ಹಾಗು ಅವುಗಳಿಗೆ ಆರ್ಥಿಕ ಬಂಡವಾಳ ಒದಗಿಸಬೇಕು ಸಹಕಾರಿ ಚಳುವಳಿ ಒಂದು ಸರ್ಕಾರಿ ಕಾರ್ಯಕ್ರಮವಾಗಿದೆ.

**೨.೪: ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿಯ ಪ್ರಗತಿ:**

ಸ್ವಾತಂತ್ರ್ಯ ಪೂರ್ವದಲ್ಲಿ ದೇಶದಲ್ಲೆಡೆ ಇದ್ದಂತೆ ಕರ್ನಾಟಕದಲ್ಲೂ ಕೃಷಿ ಹೀನಾಯ ಸ್ಥಿತಿಯಲ್ಲಿತ್ತು. ಹಿಡುವಳಿಗಳು ತುಂಬಾ ಚಿಕ್ಕವಿದ್ದವು. ನೀರಾವರಿ ಹಣಕಾಸು, ಮಾರುಕಟ್ಟೆ, ತಂತ್ರಜ್ಞಾನ ಮುಂತಾದ ಮೂಲ ಸೌಕರ್ಯಗಳ ಅಭಾವವಿತ್ತು. ಕೃಷಿ ಉತ್ಪಾದಕತೆ ಮತ್ತು ಉತ್ಪಾದನೆ ತೀರಾ ಕೆಳಮಟ್ಟದಲ್ಲಿತ್ತು. ಸ್ವಾತಂತ್ರ್ಯದ ತರುವಾಯ ತ್ವರಿತ ಆರ್ಥಿಕಾಭಿವೃದ್ಧಿ ಸಾಧನೆಗಾಗಿ ರಾಜ್ಯದಲ್ಲಿ ಆರ್ಥಿಕ ಯೋಜನೆಗಳನ್ನು ಅನುಷ್ಠಾನಗೊಳಿಸಲಾಯಿತು. ಆರ್ಥಿಕತೆಯ ಮೂಲಧಾರ ಕ್ಷೇತ್ರವಾದ ಕೃಷಿಯ ಸಮಸ್ಯೆಗಳನ್ನು ಬಗೆಹರಿಸಿ ಅದಕ್ಕೆ ಹೊಸ ರೂಪ ನೀಡುವ ಮಹತ್ವಾಕಾಂಕ್ಷೆಯ ಗುರಿಗಳನ್ನು ಪಂಚವಾರ್ಷಿಕ ಯೋಜನೆಗಳಲ್ಲಿ ಹೊಂದಲಾಯಿತು. ಇದರಿಂದಾಗಿ ಯೋಜನೆಗಳಲ್ಲಿ ರಾಜ್ಯದಲ್ಲಿ ಕೃಷಿ ಕ್ಷೇತ್ರದಲ್ಲಿ ಸಾಧಿಸಲಾದ ಪ್ರಗತಿಯು ಈ ಕೆಳಗಿನಂತಿದೆ.

**ಮೊದಲ ಪಂಚವಾರ್ಷಿಕ ಯೋಜನೆ ೧೯೫೧-೫೬:**

ಮೊದಲ ಪಂಚವಾರ್ಷಿಕ ಯೋಜನೆಯು ಕೃಷಿಗೆ ಅಗ್ರಸ್ಥಾನ ನೀಡಿತು. ಆದ್ದರಿಂದ ಮೊದಲ ಯೋಜನೆಯನ್ನು ಕೃಷಿ ಯೋಜನೆ ಎಂದೇ ಕರೆಯಲಾಗುತ್ತದೆ. ಆಹಾರದ ಕೊರತೆಯನ್ನು ನೀಗಿಸಿ ಆರ್ಥಿಕ ಅಭಿವೃದ್ಧಿಗೆ ಚಾಲನೆ ನೀಡಲು ಕೃಷಿ ನೀರಾವರಿ, ವಿದ್ಯುಚ್ಛಕ್ತಿ ಕ್ಷೇತ್ರಗಳಿಗೆ ಹೆಚ್ಚಿನ ಪ್ರಾಸಸ್ತ್ಯ ನೀಡಬೇಕೆಂದು ಯೋಜನಾ ಆಯೋಗ ಅಭಿಪ್ರಾಯಪಟ್ಟಿತು. ಈ ಮೇರೆಗೆ ಮೊದಲ ಪಂಚವಾರ್ಷಿಕ ಯೋಜನಾ ಅವಧಿಯಲ್ಲಿ ಕೃಷಿ ಮತ್ತು ಅದಕ್ಕೆ ಸಂಬಂಧಿಸಿದ ಚಟುವಟಿಕೆಗಳ

ಮೇಲೆ ೨೩.೦೬ ಕೋಟಿ ಮೊತ್ತವನ್ನು ವಿನಿಯೋಗಿಸುವ ಗುರಿ ನಿಗದಿಪಡಿಸಲಾಯಿತು. ಈ ಮೊತ್ತದಲ್ಲಿ ನೀರಾವರಿ ಉದ್ದೇಶಗಳಿಗೆ ೧೬.೦೯ ಕೋಟಿ ರೂ. ಗಳನ್ನು ಮೀಸಲಾಯಿತು. ಆದರೆ ವಾಸ್ತವವಾಗಿ ಯೋಜನೆಯ ಕೊನೆಯ ವೇಳೆಗೆ ೨೧.೧೭ ಕೋಟಿ ರೂ. ಗಳನ್ನು ಮಾತ್ರ ವಿನಿಯೋಗ ಮಾಡಲಾಯಿತು. ಆಧುನಿಕ ನಾಟಿ ಪದ್ಧತಿ ಮತ್ತು ವಿವಿಧ ಬೆಳೆಗಳನ್ನು ಬೆಳೆಯುವ ಕ್ರಮವನ್ನು ಅಳವಡಿಸಲು ಪ್ರೋತ್ಸಾಹಿಸಲಾಯಿತು.

**ಎರಡನೇ ಪಂಚವಾರ್ಷಿಕ ಯೋಜನೆ** ೧೯೫೬-೬೧

ಎರಡನೇ ಯೋಜನೆಯಲ್ಲಿ ಕೈಗಾರಿಕೆ ಪ್ರಥಮ ಆದ್ಯತೆ ನೀಡಲಾಯಿತಾದರೂ ಕೃಷಿ ಕ್ಷೇತ್ರವನ್ನು ಕಡೆಗಣಿಸಲಿಲ್ಲ. ಈ ಯೋಜನೆಯಲ್ಲಿ ಕೃಷಿ ಉತ್ಪಾದನೆಯಲ್ಲಿ ಹೆಚ್ಚಳವನ್ನು ಸಾಧಿಸುವ ಉದ್ದೇಶದಿಂದ ಭೂ ಅಭಿವೃದ್ಧಿ, ನೀರಾವರಿ ಸೌಕರ್ಯಗಳ ಹೆಚ್ಚಳ, ಸುಧಾರಿತ ಬಿತ್ತನೆ ಬೀಜಗಳ ಪೂರೈಕೆ, ರಸಗೊಬ್ಬರಗಳ ಪೂರೈಕೆ ಸಸ್ಯ ಸಂರಕ್ಷಣೆ, ಭೂ ಸಾರ ಸಂರಕ್ಷಣೆ, ಕೃಷಿ ಸಂಶೋಧನೆ ಮತ್ತು ಶಿಕ್ಷಣ ಮುಂತಾದ ಕಾರ್ಯಕ್ರಮಗಳಿಗೆ ಹೆಚ್ಚಿದ ಆದ್ಯತೆ ನೀಡಲಾಯಿತು. ಕೃಷಿ ಕ್ಷೇತ್ರದ ಅಭಿವೃದ್ಧಿಗಾಗಿ ಒಟ್ಟಾರೆ ೪೮.೮ ಕೋಟಿ ರೂ.ಗಳನ್ನು ವ್ಯಯ ಮಾಡಲಾಯಿತು.

**ಮೂರನೇ ಪಂಚವಾರ್ಷಿ ಯೋಜನೆ** ೧೯೬೧-೬೬

3ನೇ ಪಂಚವಾರ್ಷಿಕ ಯೋಜನೆ ಪನಃ ಕೃಷಿಗೆ ಪ್ರಥಮ ಆದ್ಯತೆ ನೀಡಿತು. ಈ ಯೋಜನ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸುವ ಗುರಿ ಹೊಂದಿತ್ತು. ಇದಕ್ಕಾಗಿ ಅಧಿಕ ಇಳುವರಿ, ಬಿತ್ತನೆ ಬೀಜಗಳ ಪೂರೈಕೆ, ನೀರಾವರಿ ಸೌಲಭ್ಯಗಳ ವಿಸ್ತರಣೆ, ಭೂಸಾರ ಸಂರಕ್ಷಣೆ, ರಸಾಯನಿಕ ಗೊಬ್ಬರಗಳ ಪೂರೈಕೆಯಲ್ಲಿ ಹೆಚ್ಚಳ ಮೊದಲಾದ ಕಾರ್ಯಕ್ರಮಗಳಿಗೆ ಪ್ರಾರ್ರಸ್ತ್ಯ ನೀಡಲಾಯಿತು. ಈ ಯೋಜನೆಯಲ್ಲಿ ಕೃಷಿ ಕ್ಷೇತ್ರದ ಅಭಿವೃದ್ದಿಗಾಗಿ 99.76 ಕೋಟಿ ರೂ.ಹಳನ್ನು ವ್ಯಯ ಮಾಡಲಾಯಿತು

**ವಾರ್ಷಿಕ ಯೋಜನೆಗಳು ೧೯೬೬-೬೯:**

ಮೂರನೆಯ ಪಂಚವಾರ್ಷಿಕ ಯೋಜನೆಯ ಮುಕ್ತಾಯಗೊಂಡ ನಂತರ ನಾಲ್ಕನೇ ಪಂಚವಾರ್ಷಿಕ ಯೋಜನೆಯನ್ನು ಕೈಗೊಳ್ಳಲು ಸಾಧ್ಯವಾಗಲಿಲ್ಲ, ಕಾರಣ ಚೈನ ಮತ್ತು ಪಾಕ್ ದಾಳಿಯಿಂದಾಗಿ ಆರ್ಥಿಕ ಪರಿಸ್ಥಿತಿ ಸುಧಾರಿಸಿಲ್ಲ, ಹೀಗಾಗಿ ೧೯೬೬-೬೭, ೧೯೬೭-೬೮ ಮತ್ತು ೧೯೬೮-೬೯ ರ ನಡುವೆ ಮೂರು ವಾರ್ಷಿಕ ಯೋಜನೆಗಳನ್ನು ಹಮ್ಮಿಕೊಳ್ಳಲಾಯಿತು. ಓ ಯೋಜನೆಗಳ ಅವಧಿಯಲ್ಲಿ ಸಹ ಕೃಷಿಗೆ ಮೊದಲು ಆದ್ಯತೆ ನೀಡಲಾಯಿತು. ಆಹಾರ ಮತ್ತು ಕೃಷಿ ಕಚ್ಚಾ ಸಾಮಾಗ್ರಿಗಳ ಉತ್ಪಾದನೆಯನ್ನು ಹೆಚ್ಚಿಸುವುದು. ಈ ಯೋಜನೆಗಳ ಉದ್ದೇಶವಾಗಿತ್ತು.

ಈ ಯೋಜನೆಗಳ ಅವಧಿಯಲ್ಲಿ ರಾಜ್ಯದಲ್ಲಿ ಕೃಷಿ ಕ್ಷೇತ್ರದ ಅಭಿವೃದ್ಧಿಗಾಗಿ ಒಟ್ಟು ೮೮.೮೧ ಕೋಟಿ ರೂ. ಗಳನ್ನು ವಿನಿಯೋಗಿಸಲಾಯಿತು.

ವಾರ್ಷಿಕ ಯೋಜನೆಗಳು ಜಾರಿಯಲ್ಲಿದ್ದ ಅವಧಿಯಲ್ಲಿ ಕೃಷಿ ಉತ್ಪನ್ನವನ್ನು ಹೆಚ್ಚಿಸುವ ವಸ್ತುನಿಷ್ಠ ಕಾರ್ಯಕ್ರಮವಾದ 'ಹಸಿರುಕ್ರಾಂತಿ'ಯ ವಿಧಾನಗಳನ್ನು ಜಾರಿಗೆಗೊಳಿಸಲಾಯಿತು, ಆರ್ಥಿಕ ಇಳುವರಿ ತಳಿಗಳು, ರಾಸಾಯನಿಕ ಗೊಬ್ಬರಗಳು, ಕ್ರಿಮಿನಾಶಕಗಳು, ನೀರಾವರಿ ಸೌಕರ್ಯಗಳು, ಬೆಳೆಗಳ ರಕ್ಷಣೆ ಮುಂತಾದ ಕಾರ್ಯಕ್ರಮಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಯಿತು. ಬೆಳೆಗಳನ್ನು ವೈಜ್ಞಾನಿಕ ವಿಧಾನದಲ್ಲಿ ಬೆಳೆಯಲು ತಿಳುವಳಿಕೆ ನೀಡಲಾಯಿತು. ಈ ಯೋಜನೆಗಳ ಅವಧಿಯಲ್ಲಿ ಕೃಷಿ ಕ್ಷೇತ್ರದಲ್ಲಿ ಸಾಧನೆಯಾಯಿತು.

**ನಾಲ್ಕನೇ ಪಂಚವಾರ್ಷಿಕ ಯೋಜನೆ ೧೯೬೯-೭೪**

ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ ಸಹ ಕೃಷಿಗೆ ವಿಶೇಷ ಆಧ್ಯತೆ ನೀಡಲಾಯಿತು. ಕೃಷಿ ಸಾಮಾಗ್ರಿಗಳ ಉತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸುವುದು ಈ ಯೋಜನೆಯ ಗುರಿಯಾಗಿತ್ತು. ಈ ಯೋಜನೆಯ ಅವಧಿಯಲ್ಲಿ ಕೃಷಿ ಕ್ಷೇತ್ರದ ಅಭಿವೃದ್ಧಿಗಾಗಿ ಒಟ್ಟು 185 ಕೋಟಿ ರೂ.ಗಳನ್ನು ವಿನಿಯೋಗಿಸಲಾಯಿತು. ಆರ್ಥಿಕ ಇಳುವರಿ ತಳಿಗಳ ಬಳಕೆಗೆ ಹೆಚ್ಚಿನ ಆದ್ಯತೆ ನೀಡಲಾಯಿತು. ರೈತರಿಗೆ ಸಕಾಲದಲ್ಲಿ ಬಿತ್ತನೆಬೀಜ ಪೂರೈಕೆಗೆ ;ಸಹಕಾರಿ ಬಿತ್ತನೆ ಬೀಜ ನಿಗಮವನ್ನು ಸ್ಥಾಪಿಸಲಾಯಿತು. ಈ ಯೋಜನೆಯಲ್ಲಿ ಕೃಷಿ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯಾಯಿತು.

**ಐದನೇ ಪಂಚವಾರ್ಷಿಕ ಯೋಜನೆ ೧೯೭೪-೭೮**

ಈ ಯೋಜನೆಯಲ್ಲಿ ಇಳುವರಿ ತಳಿಗಳು ಮತ್ತು ರಸಗೊಬ್ಬರ ಬಳಕೆ ಹಾಗು ಭೂಸಾರ ಸಂರಕ್ಷಣೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಯಿತು. ಸಾಂದ್ರ ಬೇಸಾಯ ಮತ್ತು ಒಣ ಭೂಮಿ ಬೇಸಯಕ್ಕೆ ಪ್ರಾಶಸ್ತ್ಯ ನೀಡಲಾಯಿತು.

**ಆರನೇ ಪಂಚವಾರ್ಷಿಕ ಯೋಜನೆ ೧೯೮೦-೮೫**

ಸಣ್ಣ ನೀರಾವರಿ, ಅಭಿವೃದ್ಧಿ, ಮಾರುಕಟ್ಟೆ ವಿಸ್ತರಣೆ, ವಿದ್ಯುಚ್ಛಕ್ತಿಯ ಬಳಕೆ ಕೃಷಿ ಹಣಕಾಸಿನ ಸೌಲಭ್ಯಗಳ ಹೆಚ್ಚಳ, ರೈತರಿಗೆ ತಾಂತ್ರಿಕ ತಿಳುವಳಿಕೆ ನೀಡಿಕೆ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು.

**ಏಳನೇ ಪಂಚವಾರ್ಷಿಕ ಯೋಜನೆ ೧೯೮೫-೯೦**

ಈ ಯೋಜನೆಯು ನೀರಾವರಿ ಮತ್ತು ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿತು.

**ಎಂಟನೇ ಪಂಚವಾರ್ಷಿಕ ಯೋಜನೆ:-**

ಗ್ರಾಮೀಣಾಭಿವೃದ್ಧಿ ನೀರಾವರಿ ಸೌಲಭ್ಯಗಳ ವಿಸ್ತರಣೆಗೆ ಪ್ರಾಶಸ್ತ್ಯ ನೀಡಲಾಯಿತು. ಒಣಭೂಮಿ ಬೇಸಾಯಕ್ಕೆ ಮಹತ್ವ ನೀಡಲಾಯಿತು.

**ಒಂಭತ್ತನೇ ಪಂಚವಾರ್ಷಿಕ ಯೋಜನೆ:-**

ಈ ಯೋಜನೆಯು ಕೃಷಿ ಮತ್ತು ಸಂಬಂಧಿತ ಚಟುವಟಿಕೆಗಳಲ್ಲಿ ೧೪೬೪ ಕೋಡಿ ರೂ ಮತ್ತು ನೀರಾವರಿ ಕ್ಷೇತ್ರದಲ್ಲಿ ೬೧೭೦ ಕೋಟಿ ರೂ.ಗಳನ್ನು ವಿನಿಯೋಗಿಸುವ ಗುರಿಯನ್ನು ನಿಗದಿಪಡಿಸಲಾಯಿತು. ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಯಿತು.

**ಹತ್ತನೇ ಪಂಚವಾರ್ಷಿಕ ಯೋಜನೆ:-**

ಈ ಯೋಜನೆಯಲ್ಲಿ ಕೃಷಿ ಮತ್ತು ಅದರ ಸಂಬಂಧೀ ಕ್ಷೇತ್ರಗಳಿಗೆ ೨೩೪೬.೯೩ ಕೋಟಿ ರೂ ನೋರಾವರಿ ಮತ್ತು ನೆರೆ ನಿಯಂತ್ರಣಗಳಿಗೆ ೧೪,೧೭೬.೫೬ ಕೋಟಿ ರೂ ಮತ್ತು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಿಗೆ ೨೨೨೭.೭೨ ಕೋಟಿ ರೂ ಗಳನ್ನು ನಿಗದಿಪಡಿಸಲಾಗಿತ್ತು.

**ಹನ್ನೊಂದನೇ ಪಂಚವಾರ್ಷಿಕ ಯೋಜನೆ:-**

**೨೦೦೭-೧೨** ಈ ಯೋಜನಾವಧಿಯಲ್ಲಿ ರಾಜ್ಯದಲ್ಲಿ ಕೃಷಿ ಪ್ರಗತಿ ಏಳು-ಬೀಳುಗಳ ನಡುವೆ ಅಶಾದಾಯಕವಾಗಿದೆ. ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸಾಕಷ್ಟು ಮಹತ್ವ ನೀಡಲಾಗಿದೆ.

# ಕರ್ನಾಟಕದ ಕೃಷಿ ಹಣಕಾಸು

ಕರ್ನಾಟಕದಲ್ಲಿ ಕೃಷಿ ಒಂದು ಅಸಂಘಟಿತ ವಲಯವಾಗಿದೆ. ಕೃಷಿಯ ಸೋಲುಗೆಲುವು ಹೆಚ್ಚಾಗಿ ಹವಾಮಾನದ ಅಂಶಗಳನ್ನೇ ಅವಲಂಭಿಸಿರುತ್ತದೆ. ಆದರೂ ಸಹ ಅದರ ಸರ್ವಾಂಗೀಣ ಅಭಿವೃದ್ಧಿಗೆ ಹಣಕಾಸು ಅತೀ ಮುಖ್ಯ . ಹಣಕಾಸು ಕೃಷಿಯ ಪ್ರಾಣವಾಯು ಇದ್ದಂತೆ. ಆದರೆ ರಾಜ್ಯದಲ್ಲಿ ಕೃಷಿಯು ಹಣಕಾಸಿನ ಕೊರತೆಯ ಸಮಸ್ಯೆಯನ್ನು ಎದುರಿಸುತ್ತದೆ. ಇದಕ್ಕೆ ಪ್ರಮುಖ ಕಾರಣವೆಂದರೆ ನಮ್ಮ ರೈತರು ತುಂಬಾ ಬಡವರಾಗಿದ್ದು ಅವರು ಋಣಭಾರದಿಂದ ನರಳುತ್ತಿದ್ದಾರೆ. ರೈತರು ತೀವ್ರ ಬಡತನದಿಂದಾಗಿ ಅವರು ತಾವಾಗಿಯೇ ಹಣಕಾಸನ್ನು ಕ್ರೋಢಿಕರಿಸಲು ಶಕ್ತರಲ್ಲ. ಆದ್ದರಿಂದ ಅನಿವಾರ್ಯವಾಗಿ ಅವರು ಹೊರಗಿನ ಮೂಲಗಳನ್ನು ಅವಲಂಬಿಸಬೇಕಾಗಿದೆ.

**ರೈತರಿಗೆ ಬೇಕಿರುವ ಸಾಲದ ಪ್ರಕಾರಗಳು:**

ರಾಜ್ಯದಲ್ಲಿ ಕೃಷಿಕರಿಗೆ ಬೇಕಿರುವ ಸಾಲದ ವಿಧಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ವರ್ಗೀಕರಿಸಬಹುದು.

**1. ಸಮಯ ಆಧಾರದ ಮೇಲೆ:–**

ಸಮಯ ಅಥವಾ ಕಾಲಾವಧಿಯ ಆಧಾರದ ಮೇಲೆ ರೈತರಿಗೆ ಬೇಕಿರುವ ಸಾಲದ ಅಗತ್ಯಗಳನ್ನು ಮೂರು ಪ್ರಕಾರಗಳಾಗಿ ಈ ಕೆಳಗಿನಂತೆ ವರ್ಗೀಕರಿಸಬಹುದು.

**ಅ) ಅಲ್ಪಾವಧಿ ಸಾಲ:**

ಸುಮಾರು ಹದಿನೈದು ತಿಂಗಳಿಗಿಂತ ಕಡಿಮೆ ಅವಧಿಗೆ ಅಗತ್ಯವಿರುವ ಸಾಲವನ್ನು ಅಲ್ಪಾವಧಿ ಸಾಲವೆಂದು ಪರಿಗಣಿಸಲಾಗುತ್ತದೆ. ಬಿತ್ತನೆ ಬೀಜಗಳು, ರಸಗೊಬ್ಬರ ಮತ್ತು ಪಶು ಆಹಾರಕೊಳ್ಳಲು, ಭೂಕಂದಾಯ ಪಾವತಿ ಮಾಡಲು, ಕುಟುಂಬದ ಸಣ್ಣ ಪುಟ್ಟ ವೆಚ್ಚಗಳನ್ನು ಭರಿಸಲು ರೈತರಿಗೆ ಅಲ್ಪಾವಧಿ ಸಾಲ ಬೇಕಾಗುತ್ತದೆ. ಸುಗ್ಗಿಯ ನಂತರ ಇಂತಹ ಸಾಲಗಳನ್ನು ಮರುಪಾವತಿ ಮಾಡಲಾಗುತ್ತದೆ.

**ಆ) ಮಧ್ಯಮಾವಧಿ ಸಾಲ:**

15 ತಿಂಗಳಿಂದ 5 ವರ್ಷಗಳ ಕಾಲಾವಧಿಯವರೆಗೆ ಪಡೆಯಲಾಗುವ ಸಾಲವನ್ನು ಮಧ್ಯಮಾವಧಿ ಸಾಲ ಎಂದು ಪರಿಗನಿಸಲಾಗುತ್ತದೆ. ದನಕರುಗಳು ಮತ್ತು ಕೃಷಿ ಉಪಕರಣಗಳನ್ನುಕೊಳ್ಳಲು ಮತ್ತು ಕೃಷಿ ಭೂಮಿಯ ಅಭಿವೃದ್ಧಿ ಕಾರ್ಯಕ್ಕೆ ಇಂತಹ ಸಾಲದ ಅವಶ್ಯಕತೆಯಿರುತ್ತದೆ.

**ಇ) ದೀರ್ಘಾವಧಿ ಸಾಲ:**

ಐದು ವರ್ಷಗಳಿಂದ ಸುಮಾರು ಹದಿನೈದು ಅಥವಾ ಇಪ್ಪತ್ತು ವರ್ಷಗಳ ಅವಧಿಗೆ ಅಗತ್ಯವಿರುವ ಸಾಲವು ದೀರ್ಘಾವಧಿ ಸಾಲವಾಗಿರುತ್ತದೆ. ಯಂತ್ರಗಳು ಮತ್ತು ಭೂಮಿಯನ್ನುಕೊಳ್ಳುವುದು, ಬಾವಿ ತೋಡಿಸುವುದು, ಹಳೆಯ ಸಾಲವನ್ನು ತೀರಿಸುವುದು, ಭೂಮಿಯ ಶಾಶ್ವತ ಅಭಿವೃದ್ಧಿ ಕಾರ್ಯಗಳು ಮುಂತಾದ ಚಟುವಟಿಕೆಗಳಿಗೆ ದೀರ್ಘಾವಧಿ ಸಾಲ ಬೇಕಾಗುತ್ತದೆ.

**2. ಉದ್ದೇಶ ಆಧಾರದ ಮೇಲೆ:**

ಉದ್ದೇಶ ಆಧಾರದ ಮೇಲೆ ರೈತರಿಗೆ ಬೇಕಿರುವ ಸಾಲದ ಅಗತ್ಯಗಳನ್ನು ಅ) ಉತ್ಪಾದಕ ಉದ್ದೇಶಕ್ಕೆ ಸಾಲ, ಆ) ಅನುಭೋಗ ಅವಶ್ಯಕತೆಗಳಿಗೆ ಸಾಲ ಮತ್ತು ಇ) ಅನುತ್ಪಾದಕ ಉದ್ದೇಶಗಳಿಗೆ ಸಾಲ ಎಂದು ಮೂರು ಪ್ರಕಾರಗಳನ್ನಾಗಿ ವಿಂಗಡಿಸಬಹುದು.

**ಅ) ಉತ್ಪಾದಕ ಸಾಲ:**

ಬಿತ್ತನೆ ಬೀಜಗಳು, ರಸಗೊಬ್ಬರಗಳು, ಕೃಷಿ ಉಪಕರಣಗಳು, ದನಕರುಗಳು ಮುಂತಾದವನ್ನುಕೊಳ್ಳಲು, ಬಾವಿ, ಕೆರೆಕಟ್ಟೆಗಳನ್ನು ದುರಸ್ತಿ ಮಾಡಲು, ಕೃಷಿ ಭೂಮಿ ಅಭಿವೃದ್ಧಿಪಡಿಸಲು, ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಮುಂತಾದ ಉತ್ಪಾದಕ ಉದ್ದೇಶಗಳಿಗೆ ಬೇಕಿರುವ ಸಾಲಗಳನ್ನು ಉತ್ಪಾದಕ ಸಾಲಗಳೆಂದು ಪರಿಗಣಿಸಬಹುದು. ಇಂತಹ ಸಾಲಗಳನ್ನು ಕೃಷಿ ಉತ್ಪಾದಕತೆ ಮೇಲೆ ನೇರ ಪರಿಣಾಮ ಬೀರುತ್ತವೆ ಹಾಗೂ ಈ ಸಾಲಗಳ ಮರುಪಾವತಿ ಹೊರೆಯೆನಿಸುವುದಿಲ್ಲ.

**ಆ) ಅನುಭೋಗ ಸಾಲ:**

ಕೃಷಿ ಉತ್ಪನ್ನದ ಮಾರಾಟ ಮತ್ತು ನಂತರದ ಸುಗ್ಗಿ ಕಾಲದ ನಡುವೆ ಅಪಾರ ಅಂತರವಿರುತ್ತದೆ. ಈ ಕಾಲಾವಧಿಯಲ್ಲಿ ಕೃಷಿಕರ ಅನುಭೋಗ ಅವಶ್ಯಕತೆಗಳನ್ನು ಪೂರೈಸಲು ಹಣಕಾಸಿನ ಅವಶ್ಯಕತೆಯಿರುತ್ತದೆ. ಬರಗಾಲ, ಪ್ರವಾಹ, ನೆರೆಹಾವಳಿ ಮುಂತಾದ ಸನ್ನಿವೇಶಗಳಲ್ಲಿ ಬೆಳೆ ನಷ್ಟ ಉಂಟಾದಾಗ ರೈತರ ಅನುಭೋಗ ಅವಶ್ಯಕತೆಗಳು ಹೆಚ್ಚಿರುತ್ತದೆ.

**ಇ) ಅನುತ್ಪಾದಕ ಸಾಲ:**

ವಿವಾಹ, ಹಬ್ಬಹೆಇದಿನಗಳು, ಸಾಮಾಜಿಕ ಸಂಪ್ರದಾಯಗಳು ಮುಂತಾದವುಗಳ ಆಚರಣೆಗೆ ಹಾಗೂ ಕೋರ್ಟು ಕಚೇರಿಗಳ ಖರ್ಚುಗಳನ್ನು ಭರಿಸಲು ರೈತರಿಗೆ ಅನುತ್ಪಾದಕ ಸಾಲ

ಬೇಕಾಗುತ್ತದೆ. ಇಂತಹ ಅನುತ್ಪಾದಕ ಸಾಲಗಳ ಮರುಪಾವತಿ ಸಾಮಾನ್ಯವಾಗಿ ಕಷ್ಟದಾಯಕವಾಗಿರುತ್ತದೆ.

**ಕೃಷಿ ಹಣಕಾಸಿನ ಮೂಲಗಳು:-**

ಕೃಷಿಗೆ ಹಣಕಾಸು ಲಭ್ಯವಾಗುವ ಮೂಲಗಳನ್ನು ಮುಖ್ಯವಾಗಿ

ಅ) ಸಾಂಸ್ಥಿಕೇತರ ಮತ್ತು ಆ) ಸಾಂಸ್ಥಿಕ ಮೂಲಗಳೆಂದು ವರ್ಗೀಕರಿಸಲಾಗಿದೆ.

ಈ ಎಲ್ಲಾ ಹಣಕಾಸಿನ ಮೂಲಗಳನ್ನು ಪಟ್ಟಿಯಲ್ಲಿ ಈ ಮುಂದಿನಂತೆ ಮೂಡಿಸಬಹುದು.




ಇವುಗಳ ವಿವರ ಮುಂದಿನಂತಿದೆ.

**1. ಸಾಂಸ್ಥಿಕೇತರ ಮೂಲಗಳು:**

ಹಣಕಾಸಿನ ಸಂಸ್ಥೆಗಳನ್ನು ಹೊರತುಪಡಿಸಿ ಇತರೆ ಮೂಲಗಳಿಂದ ದೊರೆಯುವ ಹಣಕಾಸನ್ನು ಸಾಂಸ್ಥಿಕೇತರ ಮೂಲದ ಹಣಕಾಸು ಎಂದು ಕರೆಯಲಾಗುತ್ತದೆ. ಈ ಮೂಲಗಳಲ್ಲಿ ಮುಖ್ಯವಾಗಿ ಹಣದ ಲೇವಾದೇವಿಗಾರರು, ವ್ಯಾಪಾರಿಗಳು, ದಳ್ಳಾಳಿಗಳು, ಸಂಬಂಧಿಕರು ಮತ್ತು ಇತರೆ ವ್ಯಕ್ತಿಗಳಿರುತ್ತಾರೆ.

**ಅ) ಹಣದ ಲೇವಾದೇವಿಗಾರರು:**

ಹಣದ ಲೇವಾದೇವಿಗಾರರು ಕೃಷಿ ಹಣಕಾಸನ್ನು ಪೂರೈಸುವ ಪ್ರಮುಖ ಖಾಸಗಿ ಮೂಲವಾಗಿದ್ದಾರೆ. ಇವರು ಕೃಷಿಕರಿಗೆ ಅತ್ಯಂತ ಸುಲಭ ವಿಧಿಗಳಲ್ಲಿ ಸಾಲ ನೀಡುತ್ತಾರೆ. ಹಣದ ಲೇವಿದೇವಿಗಾರರಲ್ಲಿ 1) ವೃತ್ತಿಪರ ಲೇವಾದೇವಿಗಾರರು ಮತ್ತು 2) ಕೃಷಿಕ ಲೇವಾದೇವಿಗಾರರು ಎಂಬ ಎರಡು ವರ್ಗಗಳಿವೆ. ವೃತ್ತಿಪರ ಲೇವಾದೇವಿಗಾರರು ಹಣವನ್ನು ಸಾಲವಾಗಿ ನೀಡುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಕೆಲವೊಮ್ಮೆ ಅವರು ಇತರೆ ವ್ಯಾಪಾರ ವ್ಯವಹಾರಗಳೊಂದಿಗೆ ಹಣದ ಲೇವಾದೇವಿ ವ್ಯವಹಾರವನ್ನು ನಡೆಸುತ್ತಿರುತ್ತಾರೆ. ಅವರಿಗೆ ಸಾಹುಕಾರ, ಶೇಠ್, ಮಾರವಾಡಿ, ಶೆಟ್ಟಿ ಮುಂತಾದ ಹೆಸರುಗಳಿವೆ. ಕೃಷಿಕ ಲೇವಾದೇವಿ ವರ್ಗದಲ್ಲಿ ಮುಖ್ಯವಾಗಿ ಕೃಷಿ ಚಟುವಟಿಕೆಗಳ ಜೊತೆಗೆ ಹಣದ ಲೇವಾದೇವಿ ಮಾಡುವ ಜಮೀನ್ದಾರರಿರುತ್ತಾರೆ. ಇವರ ಮುಖ್ಯ ಕಸುಬು ಕೃಷಿಯಾದರೆ ಉಪಕಸುಬು ಹನದ ಲೇವಾದೇವಿ ವ್ಯವಹಾರವಾಗಿರುತ್ತದೆ. ಹಣದ ಲೇವಾದೇವಿಗಾರರು ಎಲ್ಲಾ ಸಂದರ್ಭದಲ್ಲಿ ಸುಲಭ ರೀತಿಯ ಸಾಲ ನೀಡುತ್ತಾರೆ. ಅವರು ಸದಕಾಲ ಲಭ್ಯವಿರುತ್ತಾರೆ ಹಾಗೂ ಸುಲಭ ವಿಧಿ ವಿಧಾನಗಳಲ್ಲಿ ಸಾಲ ನೀಡುತ್ತಾರೆ. ರಾಜ್ಯದ ಕೃಷಿ ಹಣಕಾಸಿನಲ್ಲಿ ಲೇವಾದೇವಿಗಾರರ ಪಾತ್ರ ತುಂಬಾ ಹಿರಿದು.

ದೋಷಗಳು:–

ಹಣದ ಲೇವಾದೇವಿಗಾರರು ರೈತರಿಗೆ ಸುಲಭ ವಿಧಿವಿಧಾನಗಳಲ್ಲಿ ಹಣಕಾಸನ್ನು ಒದಗಿಸುತ್ತಾರಾದರೂ ಅವರ ಹಣಕಾಸಿನ ವ್ಯಾವಹಾರಗಳು ಈ ಕೆಳಗಿನ ದೋಷಗಳನ್ನು ಒಳಗೊಂಡಿವೆ.

1. ಅವರು ಅತೀ ಹೆಚ್ಚು ಬಡ್ಡಿಯನ್ನು ವಿಧಿಸುತ್ತಾರೆ.
2. ಅವರು ರೈತರನ್ನು ಅನೇಕ ರೀತಿಯ ಶೋಷಣೆಗೆ ಒಳಪಡಿಸುತ್ತಾರೆ.
3. ಸರಿಯಾದ ರೀತಿಯಲ್ಲಿ ಲೆಕ್ಕ ಪತ್ರಗಳನ್ನಿಡುವುದಿಲ್ಲ.
4. ರೈತರು ಕೃಷಿ ಸಾಮಾಗ್ರಿಗಳನ್ನು ತಮಗೇ ಮಾರಬೇಕೆಂದು ಷರತ್ತು ವಿಧಿಸಿ ಕಡಿಮೆ ಬೆಲೆಯಲ್ಲಿ ಕೊಳ್ಳುತ್ತಾರೆ.
5. ಅವರು ರೈತರು ಪಾವತಿ ಮಾಡಿದ ಹಣಕ್ಕೆ ರಶೀದಿ ನೀಡುವುದಿಲ್ಲ.
6. ಸಾಲಗಾರರ ಭೂಮಿಯನ್ನು ಲಪಟಾಯಿಸಲು ಪ್ರಯತ್ನಿಸುತ್ತಾರೆ.

**ಆ) ವ್ಯಾಪಾರಸ್ಥರು ಮತ್ತು ದಲ್ಲಾಳಿಗಳು:–**

ವ್ಯಾಪಾರಸ್ಥರು ಮತ್ತು ದಲ್ಲಾಳಿಗಳು ಸಹ ರೈತರಿಗೆ ಹಣಕಾಸನ್ನು ಒದಗಿಸುತ್ತಾರೆ. ಅವರು ಸಾಮಾನ್ಯವಾಗಿ ರೈತರು ಬೆಳೆದ ಬೆಳೆಗಳ ಆಧಾರದ ಮೇಲೆ ಸಾಲವನ್ನು ಕೊಡುತ್ತಾರೆ. ಇವರು

ಸಾಮಾನ್ಯವಾಗಿ ಹೆಚ್ಚಿನ ಬಡ್ಡಿದರವನ್ನು ವಿಧಿಸುತ್ತಾರಲ್ಲದೆ ರೈತರು ಬೆಳೆದ ಧಾನ್ಯಗಳ್ನು ಕಡಿಮೆ ಬೆಲೆಯಲ್ಲಿ ಮಾರುವಂತೆ ಒತ್ತಾಯಿಸುತ್ತಾರೆ.

**ಇ) ಸಂಬಂಧಿಕರು:–**

ರೈತರು ಅನೇಕ ಸಂದರ್ಭದಲ್ಲಿ ತಮ್ಮ ಸಂಬಂಧಿಕರು ಮತ್ತು ಆಪ್ತರಿಂದ ಸಾಲವನ್ನು ತರುವುದುಂಟು. ಇವರು ಹೆಚ್ಚಿನ ಸಂದರ್ಭಗಳಲ್ಲಿ ಬಡ್ಡಿ ವಿಧಿಸುವುದಿಲ್ಲ. ಅಕಸ್ಮಾತ್ ವಿಧಿಸಿದರೂ ಸಹ ಅದು ಕಡಿಮೆ ಪ್ರಮಾಣದಲ್ಲಿರುತ್ತದೆ.

**ಈ) ಜಮೀನ್ದಾರರು:–**

ಕೃಷಿ ಹಣಕಾಸಿನ ಪೂರೈಕೆಯಲ್ಲಿ ಶ್ರೀಮಂತ ರೈತರು ಮತ್ತು ಜಮೀನ್ದಾರರಿಗೆ ವಿಶೇಷ ಸ್ಥಾನವಿದೆ. ಇವರು ಹೆಚ್ಚಿನ ಸಂದರ್ಭಗಳಲ್ಲಿ ಬಡ್ಡಿ ವಿಧಿಸುತ್ತಾರೆ. ಆದರೂ ಸಹ ರೈತರು ಅನಿವಾರ್ಯವಾಗಿ ಈ ಮೂಲದಿಂದ ಸಾಲ ಪಡೆಯುತ್ತಾರೆ.

**ಉ) ಇತರೆ ಮೂಲಗಳು:–**

ಸಣ್ಣ ವ್ಯಾಪಾರಸ್ತರು, ಧಾರ್ಮಿಕ ದತ್ತಿ ಸಂಸ್ಥೆಗಳು ಮುಂತಾದ ಸಾಂಸ್ಥಿಕೇತರ ಮೂಲಗಳಿಂದಲೂ ಕೃಷಿಗೆ ಹಣಕಾಸು ಪೂರೈಕೆಯಾಗುತ್ತದೆ. ಈ ಸಾಂಸ್ಥಿಕೇತರ ಮೂಲದಿಂದ ಕೃಷಿಗೆ ಪೂರೈಕೆಯಾಗುತ್ತಿರುವ ಹಣಕಾಸಿನ ಪ್ರಮಾಣ ಕ್ರಮೇಣವಾಗಿ ಕಡಿಮೆಗೊಳ್ಳುತ್ತಿದೆ.

**2. ಸಾಂಸ್ಥಿಕ ಮೂಲಗಳು:–**

ಕೃಷಿಗೆ ಅನೇಕ ಹಣಕಾಸಿನ ಸಂಸ್ಥೆಗಳು ಸಾಲವನ್ನು ಒದಗಿಸುತ್ತದೆ. ವ್ಯವಸ್ಥಿತವಾಗಿ ಸ್ಥಾಪನೆಯಾದ ಹಣಕಾಸಿನ ಸಂಸ್ಥೆಗಳಿಂದ ದೊರೆಯುವ ಸಾಲವನ್ನು ಸಾಂಸ್ಥಿಕ ಮೂಲದ ಸಾಲ ಎಂದು ಕರೆಯಲಾಗುತ್ತದೆ. ಇಂತಹ ಹಣಕಾಸಿನ ಸಂಸ್ಥೆಗಳೆಂದರೆ ಸಹಕಾರಿ ಸಂಘಗಳು, ಭೂ ಅಭಿವೃದ್ಧಿ ಬ್ಯಾಂಕು, ಭಾರತೀಯ ರಿಜರ್ವ್ ಬ್ಯಾಂಕು, ಭಾರತೀಯ ಸ್ಟೇಟ್ ಬ್ಯಾಂಕ್, ವಿವಿಧ ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ಸರ್ಕಾರ ಮುಂತಾದವು. ಪ್ರಮುಖ ಸಾಂಸ್ಥಿಕ ಹಣಕಾಸಿನ ಮೂಲಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.

**ಅ) ಸಹಕಾರಿ ಸಂಘಗಳು:**

ಸಹಕಾರಿ ಸಂಘಗಳು ಕೃಷಿ ಹಣಕಾಸಿನ ಪ್ರಮುಖ ಮೂಲಗಳಾಗಿವೆ. ಗ್ರಾಮೀಣ ಋಣಭಾರವನ್ನು ತಗ್ಗಿಸಿ ಜನರಲ್ಲಿ ಉಳಿತಾಯ ಪ್ರವೃತ್ತಿಯನ್ನು ಬೆಳೆಸುವುದು ಸಹಕಾರ ಸಂಘಗಳ ಸ್ಥಾಪನೆಯ ಮೂಲ ಉದ್ದೇಶವಾಗಿದೆ. ರಾಜ್ಯದಲ್ಲಿ ಸಹಕಾರಿ ಸಂಘಗಳು ಕೃಷಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ನೀಡುತ್ತವೆ. ಇವುಗಳು ಕೃಷಿಗೆ ಅತ್ಯಂತ ಸುಲಭ ಮತ್ತು ಅಗ್ಗದ

ಸಾಲದ ಮೂಲಗಳಾಗಿವೆ. ಸ್ವಾತಂತ್ರ್ಯಾ ನಂತರ ಸಹಕಾರಿ ಚಳುವಳಿ ವ್ಯಾಪಕವಾಗಿ ಹಬ್ಬಿದೆ. ಕರ್ನಾಟಕದಲ್ಲಿ ಸಹಕಾರ ಕೃಷಿ ಪತ್ತಿನ ಮೂರು ಹಂತಗಳ ವ್ಯವಸ್ಥೆಯು ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಒದಗಿಸುತ್ತದೆ. ಗ್ರಾಮಾಂತರ ಮಟ್ಟದಲ್ಲಿ 4500 ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿವೆ, ಇವಲ್ಲದೆ 596 ಶಾಖೆಗಳುಳ್ಳ ಜಿಲ್ಲಾ ಮಟ್ಟದಲ್ಲಿರುವ 21 ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳು, ರಾಜ್ಯಮಟ್ಟದಲ್ಲಿ ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಮತ್ತು 177 ಶಾಖೆಗಳಿರುವ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ಎರಡು ಹಂತದ ದೀರ್ಘಾವಧಿ ಸಾಲ ನೀಡಿಕೆ ವ್ಯವಸ್ಥೆಯಲ್ಲಿ ಪಾಲ್ಗೊಂಡಿವೆ. ರಾಜ್ಯದಲ್ಲಿ ನವೆಂಬರ್, 2011 ರ ಮಾರ್ಚ್ ಅಂತ್ಯದ ವೇಳೆಗೆ ಸಹಕಾರಿ ಸಾಲ ವ್ಯವಸ್ಥೆಯ ಸಾಲ ವ್ಯವಸ್ಥೆಯ ಮೂಲಕ 4468.90 ಕೋಟಿ ರೂ. ಅಲ್ಪಾವಧಿ, 232.33 ಕೋಟಿ ರೂ. ಮಧ್ಯಮಾವಧಿ ಮತ್ತು 186.89 ಕೋಟಿ ರೂ. ದೀರ್ಘಾವಧಿ ಸಾಲಗಳನ್ನು ನೀಡಲಾಗಿತ್ತು. ರಾಜ್ಯ ಸರ್ಕಾರವು 1.4.2011 ರಿಂದ ಕೃಷಿ ಸಾಲವನ್ನು ಶೇ. 1ರ ಬಡ್ಡಿ ದರದಲ್ಲಿ ಸಹಕಾರಿ ಸಂಸ್ಥೆಗಳ ಮೂಲಕ ರೂ.3 ಲಕ್ಷದವರೆಗೆ ನೀಡುವ ಯೋಜನೆಯನ್ನು ಜಾರಿಗೆಗೊಳಿಸಿದೆ.

**ಆ) ಭೂ ಅಭಿವೃದ್ಧಿ ಬ್ಯಾಂಕುಗಳು:**

ರೈತರಿಗೆ ದೀರ್ಘಾವಧಿಯ ಸಾಲವನ್ನೊದಗಿಸಲು ಭೂ ಅಭಿವೃದ್ಧಿ ಬ್ಯಾಂಕುಗಳನ್ನು ಸ್ಥಾಪಿಸಲಾಗಿದೆ. ಮೊದಲು ಈ ಬ್ಯಾಂಕುಗಳನ್ನು ಭೂ ಅಡಮಾನ ಬ್ಯಾಂಕುಗಳೆಂದು ಕರೆಯಲಾಗುತ್ತಿತ್ತು. ಈಗ ಈ ಬ್ಯಾಂಕುಗಳನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳೆಂದು ಕರೆಯಲಾಗುತ್ತಿತ್ತು. ಈ ಬ್ಯಾಂಕುಗಳು ರೈತರ ಭೂಮಿಯ ಆಧಾರದ ಮೇಲೆ 15 ರಿಂದ 20 ವರ್ಷಗಳಾವಧಿಯ ದೀರ್ಘಕಾಲಿಕ ಸಾಲವನ್ನು ಕಡಿಮೆ ಬಡ್ಡಿ ದರದಲ್ಲಿ ಒದಗಿಸುತ್ತದೆ. ಹಳೆಯ ಸಾಲದ ಮರುಪಾವತಿ, ಕೃಷಿ ಭೂಮಿಯ ಕೊಂಡುಕೊಳ್ಳುವಿಕೆ, ಕೃಷಿ ಭೂಮಿಯ ಶಾಶ್ವತ ಅಭಿವೃದ್ಧಿ, ಬಾವಿಗಳನ್ನು ತೋಡಲು, ಯಂತ್ರ ಮತ್ತು ಉಪಕರಣಗಳನ್ನು ಕೊಳ್ಳಲು ಮುಂತಾದ ಉದ್ದೇಶಗಳಿಗೆ ಈ ಬ್ಯಾಂಕುಗಳು ಸಾಲ ನೀಡುತ್ತವೆ. ಇಂದು ಕರ್ನಾಟಕದಲ್ಲಿ ರಾಜ್ಯಮಟ್ಟದಲ್ಲಿ ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಭಿವೃದ್ಧಿ ಬ್ಯಾಂಕು ಮತ್ತು ತಾಲ್ಲೂಕು ಮಟ್ಟದಲ್ಲಿ 177 ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತದೆ.

**ಇ) ಭಾರತೀಯ ರಿಜರ್ವ್ ಬ್ಯಾಂಕ್:**

ದೇಶದ ಅತ್ಯುನ್ನತ ಹಣಕಾಸಿನ ಸಂಸ್ಥೆಯಾದ ರಿಜರ್ವ್ ಬ್ಯಾಂಕು ಕೃಷಿ ಹಣಕಾಸಿನ ಕ್ಷೇತ್ರದಲ್ಲಿ ಪ್ರಮುಖ ಸ್ಥಾನ ಪಡೆದಿದೆ. ರಿಜರ್ವ್ ಬ್ಯಾಂಕು ರೈತರಿಗೆ ಸಾಲಗಳನ್ನು ನೀಡುವುದಿಲ್ಲ. ಪ್ರತಿಯಾಗಿ ಅದು ರಾಜ್ಯ ಸಹಕಾರಿ ಬ್ಯಾಂಕು ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳ ಮುಖೇನ ಪ್ರಾಥಮಿಕ ಸಹಕಾರಿ ಸಂಘಗಳಿಗೆ ಹಣಕಾಸನ್ನು ಪೂರೈಸಿ ರೈತರಿಗೆ ಸಾಲ ನೀಡಲು ಸಹಕರಿಸುತ್ತದೆ. ಕೃಷಿ ಹಣಕಾಸಿನ ಪ್ರಾಮುಖ್ಯತೆಯನ್ನು ಮನಗಂಡು ಅದು ಬೇರೆಯೇ ಆದ 'ಕೃಷಿ ಸಾಲ ವಿಭಾಗ'ವನ್ನು ಸ್ಥಾಪಿಸಿದೆ. 1982ರ ಜುಲೈನಲ್ಲಿ ರಾಷ್ಟೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕಿನ ಸ್ಥಾಪನೆಯ ತರುವಾಯ ರಿಜರ್ವ್ ಬ್ಯಾಂಕು ತನ್ನ ಕೃಷಿ ಹಣಕಾಸು ನೀಡುವ ಜವಾಬ್ದಾರಿಯನ್ನು ಅದಕ್ಕೆ ವರ್ಗಾಯಿಸಿದೆ.

**ಈ) ಭಾರತೀಯ ಸ್ಟೇಟ್ ಬ್ಯಾಂಕ್:**

1955 ರಲ್ಲಿ ಸ್ಥಾಪನೆಯಾದಂದಿನಿಂದ ಭಾರತೀಯ ಸ್ಟೇಟ್ ಬ್ಯಾಂಕ್ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕೃಷಿಗೆ ಹಣಕಾಸನ್ನು ಒದಗಿಸುತ್ತದೆ. ಕೃಷಿ ಹಣಕಾಸಿನ ವಿಚಾರಗಳಿಗೆ ಸಂಬಂಧಿಸಿದಂತೆ ಭಾರತೀಯ ಸ್ಟೇಟ್ ಬ್ಯಾಂಕಿನ ಚಟುವಟಿಕೆಗಳು ಈ ಕೆಳಗಿನಂತಿವೆ.

*** ಸಹಕಾರಿ ಬ್ಯಾಂಕುಗಳಿಗೆ ಅಲ್ಪಾವಧಿ ಸಾಲ:**

ಸ್ಟೇಟ್ ಬ್ಯಾಂಕು ರಾಜ್ಯ ಸಹಕಾರಿ ಬ್ಯಾಂಕುಗಳು, ಕೇಂದ್ರ ಸಹಕಾರಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರಿ ಸಂಘಗಳಿಗೆ ಅಗ್ಗದ ದರದಲ್ಲಿ ಸಾಲ ನೀಡಿ ಅವುಗಳ ಮೂಲಕ ಕೃಷಿ ವಲಯಕ್ಕೆ ದೀರ್ಘಕಾಲಿಕ ಸಾಲಸೌಲಭ್ಯ ದೊರೆಯುವಂತೆ ಮಾಡಿದೆ.

*** ಭೂ ಅಭಿವೃದ್ದಿ ಬ್ಯಾಂಕುಗಳಿಗೆ ನೆರವು:**

ಭೂ ಅಭಿವೃದ್ದಿ ಬ್ಯಾಂಕುಗಳ ಸಾಲಪತ್ರಗಳಲ್ಲಿ ಹಣತೊಡಗಿಸುವುದರ ಮೂಲಕ ಹಾಗೂ ಸಾಲಪತ್ರಗಳ ಆಧಾರದ ಮೇಲೆ ಸಾಲ ನೀಡುವುದರ ಮೂಲಕ ಸ್ಟೇಟ್ ಬ್ಯಾಂಕ್ ಕೃಷಿ ವಲಯಕ್ಕೆ ದೀರ್ಘಕಾಲಿಕ ಸಾಲ ಸೌಲಭ್ಯ ದೊರೆಯುವಂತೆ ಮಾಡಿದೆ.

*** ಸಹಕಾರಿ ಮಾರಾಟ ಮತ್ತು ಸಂಸ್ಕರಣ ಸಂಘಗಳಿಗೆ ಸಹಾಯ:**

ಸಕ್ಕರೆ ಕಾರ್ಖಾನೆಗಳು, ಗಿರಣಿ ಯಂತ್ರಗಳು ಮುಂತಾದ ಸಹಕಾರಿ ಮಾರಾಟ ಮತ್ತು ಸಂಸ್ಕರಣ ಸಂಘಗಳಿಗೆ ಅದು ಹಣಕಾಸಿನ ಸಹಾಯ ಒದಗಿಸುತ್ತದೆ.

*** ದಾಸ್ತಾನು ಮಳಿಗೆಗಳ ಅಭಿವೃದ್ಧಿ:**

ಭಾರತೀಯ ಸ್ಟೇಟ್ ಬ್ಯಾಂಕು ದಾಸ್ತಾನು ಮಳಿಗೆಗಳನ್ನು ಅಭಿವೃದ್ಧಿಪಡಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಸಾಲ ನೀಡುತ್ತದೆ.

*** ಗ್ರಾಮ ದತ್ತು ಸ್ವೀಕಾರ ಯೋಜನೆ;**

ಸ್ಟೇಟ್ ಬ್ಯಾಂಕು ಮತ್ತು ಅದರ ಅಂಗ ಸಂಸ್ಥೆಗಳು ಗ್ರಾಮಗಳನ್ನು ದತ್ತು ಸ್ವೀಕರಿಸಿ ಅವುಗಳ ಸಾಲದ ಅವಶ್ಯಕತೆಗಳನ್ನು ಪೂರೈಸುತ್ತದೆ.

*** ಸಮಗ್ರ ಗ್ರಾಮೀಣ ಅಭಿವೃದ್ಧಿ:**

ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನದಲ್ಲಿ ಸ್ಟೇಟ್ ಬ್ಯಾಂಕು ಪ್ರಮುಖ ಪಾತ್ರ ವಹಿಸುತ್ತದೆ.

*** ಕೃಷಿ ಅಭಿವೃದ್ಧಿ ಶಾಖೆಗಳು:**

ಸ್ಟೇಟ್ ಬ್ಯಾಂಕು ವಿಶೇಷ ಕೃಷಿ ಅಭಿವೃದ್ಧಿ ಬ್ಯಾಂಕುಗಳನ್ನು ಸ್ಥಾಪಿಸಿ ಅವುಗಳ ಮುಖೇನ ಕೃಷಿ ಅಭಿವೃದ್ಧಿಗೆ ಹಣಕಾಸನ್ನು ಪೂರೈಸುತ್ತದೆ.

ಇಷ್ಟೇ ಅಲ್ಲದೆ ಅದು ಮುಂದಾಳು ಬ್ಯಾಮಕು ಯೋಜನೆಯ ಅನುಷ್ಠಾನದಲ್ಲಿ ಪಾಲ್ಗೊಂಡಿದೆ, ಅನೇಕ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಗೆ ಕಾರಣವಾಗಿದೆ ಹಾಗೂ ಸಹಕಾರಿ ಬ್ಯಾಂಕುಗಳ ಹಣ ರವಾನೆ ಕಾರ್ಯದಲ್ಲಿ ಸಹಕರಿಸುತ್ತದೆ.

**ಉ) ವಾಣಿಜ್ಯ ಬ್ಯಾಂಕುಗಳು:**

ಇತ್ತಿಚಿನ ದಿನಗಳಲ್ಲಿ ವಾಣಿಜ್ಯ ಬ್ಯಾಂಕುಗಳು ಕೃಷಿ ಹಣಕಾಸಿನ ಪೂರೈಕೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಅದರಲ್ಲೂ ಪ್ರಮುಖವಾಗಿ 1969 ರಲ್ಲಿ 14 ಬಹುದೊಡ್ಡ ವಾಣಿಜ್ಯ ಬ್ಯಾಂಕುಗಳು ಮತ್ತು 1980 ರಲ್ಲಿ ಇನ್ನೂ ಆರು ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣದ ನಂತರ ಕೃಷಿ ಹಣಕಾಸು ಪೂರೈಕೆ ಹೆಚ್ಚುತ್ತಿದೆ. ರಾಷ್ಟ್ರೀಕರಣಕ್ಕಿಂತಲೂ ಹಿಂದೆ ವಾಣಿಜ್ಯ ಬ್ಯಾಂಕುಗಳು ಹೆಚ್ಚಾಗಿ ನಗರ ಪ್ರದೇಶಗಳಲ್ಲಿ ವಾಣಿಜ್ಯ ಮತ್ತು ಕೈಗಾರಿಕ ಚಟುವಟಿಕೆಗಳಿಗೆ ಹಣಕಾಸು ಒದಗಿಸುತ್ತಿದ್ದವು. ಇತ್ತಿಚಿನ ದಿನಗಳಲ್ಲಿ ವಾಣಿಜ್ಯ ಬ್ಯಾಂಕುಗಳು ಶೇಕಡ 40 ಕ್ಕಿಂತಲೂ ಅಧಿಕ ಪ್ರಮಾಣದಲ್ಲಿ ಆದ್ಯತಾ ವಲಯಕ್ಕೆ ಹಣಕಾಸನ್ನು ಪೂರೈಸುತ್ತಿವೆ. ವಾಣಿಜ್ಯ ಬ್ಯಾಂಕುಗಳು ಕೃಷಿಗೆ ನೇರವಾಗಿ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಒದಗಿಸುತ್ತವೆ. ರಾಜ್ಯದಲ್ಲಿ ಎಲ್ಲಾ ವಾಣಿಜ್ಯ ಬ್ಯಾಂಕುಗಳ (6 ಪ್ರಾದೇಶಿಕ ಗ್ರಾಮೀಣಾ ಬ್ಯಾಂಕುಗಳ ಶಾಖೆಗಳೂ ಸೇರಿದಂತೆ) ಶಾಖೆಗಳ ಸಂಖ್ಯೆ 7268 (ಮಾರ್ಚ್ 2011ರ ಅಂತ್ಯದಲ್ಲಿ) ಕ್ಕಿಂತಲೂ ಅಧಿಕವಿದ್ದು ಇದರಲ್ಲಿ 4301 ಶಾಖೆಗಳು ಗ್ರಾಮೀಣ ಮತ್ತು ಅರೆಪಟ್ಟಣ ಪ್ರದೇಶಗಳಲ್ಲಿ ಸ್ಥಾಪಿಸಲ್ಪಟ್ಟಿವೆ. ವಾಣಿಜ್ಯ ಬ್ಯಾಂಕುಗಳು ಕೃಷಿಗೆ ಪ್ರತ್ಯಕ್ಷ ಮತ್ತು ಪರೋಕ್ಷ ಹಣಕಾಸು ಸೌಲಭ್ಯ ಒದಗಿಸುದರ ಜೊತೆಗೆ ಗ್ರಾಮದತ್ತು ಯೋಜನೆ, ಮುಂದಾಳು ಬ್ಯಾಂಕು ಯೋಜನೆ, ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ರೈತರ ಸೇವಾ ಸಹಕಾರಗಳ ಸ್ಥಾಪನೆ ಮುಂತಾದ

ಯೋಜನೆಗಳ ಅನುಷ್ಠಾನದಲ್ಲಿ ಪಾಲ್ಗೊಳ್ಳುತ್ತಿವೆ. ವಾಣಿಜ್ಯ ಬ್ಯಾಂಕುಗಳು ಅನೇಕ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಗೆ ಕಾರಣವಾಗಿವೆ. ಹೀಗೆ ಕೃಷಿ ಹಣಕಾಸಿನ ಪೂರೈಕೆಯಲ್ಲಿ ವಾಣಿಜ್ಯ ಬ್ಯಾಂಕುಗಳು ಪ್ರಮುಖ ಪಾತ್ರವಹಿಸುತ್ತದೆ.

**ಊ) ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು:**

ಇಪ್ಪತ್ತು ಅಂಶ ಕಾರ್ಯಕ್ರಮದ ಅಂಗವಾಗಿ ರಾಜ್ಯದಲ್ಲಿ ಪ್ರಥಮ ಬಾರಿಗೆ ಗ್ರಾಮೀಣ ಬ್ಯಾಂಕುಗಳನ್ನು 1975 ರಲ್ಲಿ ಸ್ಥಾಪಿಸಲಾಯಿತು. ಗ್ರಾಮೀಣ ಭಾಗದ ಅಭಿವೃದ್ಧಿ ಚಟುವಟಿಕೆಗಳಿಗೆ ಹಣ ಒದಗಿಸುವುದು ಈ ಬ್ಯಾಂಕುಗಳ ಪ್ರಮುಖ ಧ್ಯೇಯವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ, ವ್ಯಾಪಾರ, ಕೈಗಾರಿಕೆ ಮತ್ತು ಇತರೆ ಚಟುವಟಿಕೆಗಳ ಪ್ರಗತಿಯಾಗಿ ಗ್ರಾಮೀಣ ಜನರಿಗೆ ಅದರಲ್ಲೂ ವಿಶೇಷವಾಗಿ ಸಣ್ಣ ಮತ್ತು ಅತಿ ಸಣ್ಣ ರೈತರು, ಕೃಷಿ ಕಾರ್ಮಿಕರು, ಕುಶಲಕಾರ್ಮಿಕರು ಮತ್ತು ಸಣ್ಣ ಕೈಗಾರಿಕೋದ್ಯಮಿಗಳಿಗೆ ಹಣಕಾಸಿನ ನೆರವು ನೀಡುವುದು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಮುಖ್ಯ ಕಾರ್ಯವಾಗಿದೆ. ಈ ಬ್ಯಾಂಕುಗಳು ಯಾವುದಾದರೊಂದು ವಾಣಿಜ್ಯ ಬ್ಯಾಂಕಿನಿಂದ ಸ್ಥಾಪಿಸಲ್ಪಟ್ಟಿರುತ್ತವೆ. ಪ್ರತೀ ಗ್ರಾಮೀಣ ಬ್ಯಾಂಕಿನ ಷೇರು ಬಂಡವಾಳ ರೂ. 1 ಕೋಟಿಯಾಗಿದ್ದು ಇದರಲ್ಲಿ ಕೇಂದ್ರ ಸರ್ಕಾರ ಶೇಕಡ 50, ರಾಜ್ಯ ಸರ್ಕಾರ ಶೇಕಡ 15 ಮತ್ತು ವಾಣಿಜ್ಯ ಬ್ಯಾಂಕು ಶೇಕಡ 35 ರಷ್ಟು ಪಾಲು ಹೊಂದಿರುತ್ತದೆ. ಈ ಬ್ಯಾಂಕುಗಳ ಕಾರ್ಯ ಕ್ಷೇತ್ರ ಕೇವಲ ಒಂದು ಅಥವಾ ಹೆಚ್ಚಿನ ಜಿಲ್ಲೆಗಳನ್ನೊಲಗೊಂಡ ನಿರ್ದಿಷ್ಟ ಸೀಮಿತವಾಗಿರುತ್ತದೆ. ಮಾರ್ಚ್ 2011ರ ಅಂತ್ಯದಲ್ಲಿ ರಾಜ್ಯದಲ್ಲಿ 06 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಇದ್ದು, ಅವುಗಳ ಶಾಖೆಗಳ ಜಾಲ 1256 ಆಗಿತ್ತು. ಈ ಬ್ಯಾಂಕುಗಳು ಕೃಷಿಕ್ಷೇತ್ರಕ್ಕೆ ಪೂರೈಸಿದ ಹಣಕಾಸಿನ ಪ್ರಮಾನ 2009ರ ಜೂನ್ ವೇಳೆಗೆ ರೂ. 6941 ಕೋಟಿಗಳಾಗಿದ್ದವು. ಗ್ರಾಮೀಣ ಬ್ಯಾಂಕುಗಳ ಶಾಖೆಗಳಲ್ಲಿ ಶೇಕಡ 90 ಕ್ಕಿಂತ ಅಧಿಕ ಸಂಖ್ಯೆಯ ಶಾಖೆಗಳು ಬ್ಯಾಂಕಿಂಗ್ ಸೌಲಭ್ಯ ಇಲ್ಲದೆ ಕಡೆ ಸ್ಥಾಪನೆಗೊಂಡಿವೆ ಹಾಗೂ ಸಾಲಗಳಲ್ಲಿ ಶೇಕಡ 90 ಕ್ಕಿಂತಲೂ ಅಧಿಕ ಪ್ರಮಾಣದ ಸಾಲವನ್ನು ಸಮಾಜದ ದುರ್ಬಲ ವರ್ಗದವರಿಗೆ ನೀಡುತ್ತವೆ.

**ಋ) ರಾಷ್ಟೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕು:**

ಡಾ.ಬಿ. ಶಿವರಾಮನ್ ನೇತೃತ್ವದ 'ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ಸಾಂಸ್ಥಿಕ ಪತ್ತಿನ ಹಣಕಾಸು ವ್ಯವಸ್ಥೆಯ ಪುನರ್ ಪರಿಶೀಲನಾ ಸಮಿತಿ'ಯ ಶೀಘಾರಸ್ಸಿನ ಮೇರೆಗೆ ಕೇಂದ್ರಸರ್ಕಾರ 1982 ರ ಜುಲೈ ಒಂದರಂದು ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕನ್ನು ಸ್ಥಾಪಿಸಿತು. ಇದು ಭಾರತದ ರಿಜರ್ವ್ ಬ್ಯಾಂಕಿನ ಅಂಗಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದ್ದು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಯ ಹಣಕಾಸಿನ ಪೂರೈಕೆಗೆ ಸಂಬಂಧಿಸಿದಂತೆ ಕೃಷಿ ಮತ್ತು

ಗ್ರಾಮೀಣ ಅಭಿವೃದ್ಧಿ ನಿಗಮದ ಮತ್ತು ಭಾರತದ ರಿಜರ್ವ್ ಬ್ಯಾಂಕಿನ ಮರುಹಣಕಾಸಿನ ಕಾರ್ಯಗಳನ್ನು ಈ ಬ್ಯಾಂಕಿಗೆ ವಹಿಸಲಾಗಿದೆ. ಈ ಬ್ಯಾಂಕು 100 ಕೋಟಿ ರೂ.ಗಳ ಷೇರು ಬಂಡವಾಳದೊಂದಿಗೆ ಕಾರ್ಯಾರಂಭ ಮಾಡಿತು. ಇತ್ತಿಚೆಗೆ ಕೇಂದ್ರ ಸರ್ಕಾರ ನಬಾರ್ಡ್‌ನ ಷೇರು ಬಂಡವಾಳವನ್ನು ರೂ. 5000 ಕೋಟಿಗೆ ಹೆಚ್ಚಿಸಿದೆ. ಇದರ ಷೇರು ಬಂಡವಾಳದಲ್ಲಿ ಕೇಂದ್ರ ಸರ್ಕಾರ ಮತ್ತು ರಿಜರ್ವ್ ಬ್ಯಾಂಕು ಸಮಪಾಲು ಹೊಂದಿವೆ. ಇದರ ಆಡಳಿತ ನಿರ್ವಹಣೆಗೆ ಒಂದು ನಿರ್ದೇಶಕರ ಕೇಂದ್ರೀಯ ಮಂಡಳಿ ಇದ್ದು ಇದರಲ್ಲಿ 20 ಮಂದಿ ನಿರ್ದೇಶಕರು ಮತ್ತು ಒಬ್ಬ ಅಧ್ಯಕ್ಷರಿದ್ದಾರೆ.

**ಕಾರ್ಯಗಳು:–**

ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸುತ್ತದೆ.

1. ಗ್ರಾಮೀಣ ವಲಯದ ಪತ್ತಿನ ಅಗತ್ಯತೆಗಳನ್ನು ನೋಡಿಕೊಳ್ಳುವ ಅತ್ಯುನ್ನತ ಬ್ಯಾಂಕಾಗಿ ಕಾರ್ಯನಿರ್ವಹಿಸುತ್ತದೆ.

2. ಅದರ ಕೃಷಿ ಸಾಲ ವಿಭಾಗ ಮೂಲಕ ಸಹಕಾರಿ ವಲಯದ ಕಾರ್ಯವಿಧಾನವನ್ನು ಮೇಲ್ವಿಚಾರಣೆ ನಡೆಸುತ್ತಿದೆ.

3. ಅದು ರಾಜ್ಯ ಸಹಕಾರಿ ಬ್ಯಾಂಕುಗಳಿಗೆ 18 ತಿಂಗಳಗಳೊಗಿನ ಅಲ್ಪಾವಧಿ ಸಾಲ ನೀಡುತ್ತದೆ.

4. ಈ ಬ್ಯಾಂಕು ಕೆಲ ನಿರ್ದಿಷ್ಟ ಕೃಷಿ ಉದ್ದೇಶಗಳಿಗಾಗಿ 18 ತೊಂಗಳಿನಿಂದ 7 ವರ್ಷಗಳ ಅವಧಿಗೆ ಮಧ್ಯಮಾವಧಿ ಸಾಲವನ್ನು ರಾಜ್ಯ ಸಹಕಾರಿ ಬ್ಯಾಂಕುಗಳು ಮತ್ತು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೆ ಒದಗಿಸುತ್ತಿದೆ. ಸಂಸ್ಕರಣ ಸಹಕಾರಿ ಸಂಘಗಳ ಷೇರುಗಳನ್ನು ಕೊಳ್ಳುತ್ತದೆ ಹಾಗೂ ನೈಸರ್ಗಿಕ ವಿಕೋಪಗಳಿಗೊಳಗಾದ ಪ್ರದೇಶಗಳ ಅಲ್ಪಾವಧಿ ಸಾಲಗಳನ್ನು ಮಧ್ಯಮಾವಧಿ ಸಾಲಗಳಾಗಿ ಪರಿವರ್ತಿಸುತ್ತದೆ.

5. ಗ್ರಾಮೀಣಾಭಿವೃದ್ಧಿ ಬ್ಯಾಂಕು ಕೃಷಿ ವಲಯದಲ್ಲಿ ಹೂಡಿಕೆಗಾಗಿ ರಾಜ್ಯ ಸಹಕಾರಿ ಬ್ಯಾಂಕುಗಳು, ಭೂ ಅಭಿವೃದ್ಧಿ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕುಗಳಿಗೆ 25 ವರ್ಷಗಳವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ನೀಡುತ್ತದೆ.

6. ಸಹಕಾರಿ ಪತ್ತಿನ ಸಂಘಗಳಲ್ಲಿ ಷೇರು ಬಂಡವಾಳ ತೊಡಗಿಸಲು ರಾಜ್ಯ ಸರ್ಕಾರಗಳಿಗೆ 20 ವರ್ಷಗಳವರೆಗೆ ದೀರ್ಘಾವಧಿ ಸಾಲ ನೀಡುತ್ತದೆ.

7. ಜಿಲ್ಲಾ ಮತ್ತು ರಾಜ್ಯ ಸಹಕಾರಿ ಬ್ಯಾಂಕುಗಳು ಮತ್ತು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ

ತಪಾಸಣೆ ಕೆಲಸ ಗ್ರಾಮೀಣ ಬ್ಯಾಂಕಿನ ಜವಾಬ್ದಾರಿಯಾಗಿದೆ ಮತ್ತು

8. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಯಲ್ಲಿ ಸಂಶೋಧನೆ ಕೈಗೊಳ್ಳಲು, ದೇಶದ ವಿವಿಧ ಭಾಗಗಳಿಗೆ ಅನುಕೂಲವಾಗುವಂತಹ ಕಾರ್ಯಗಳನ್ನು ಮತ್ತು ಯೋಜನೆಗಳನ್ನು ರೂಪಿಸಲು ಮತ್ತು ವಿಶೇಷ ಚಟುವಟಿಕೆಗಳಿಗೆ ನೆರವಾಗಲು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಮಕು 'ಸಂಶೋಧನೆ ಮತ್ತು ಅಭಿವೃದ್ಧಿ ನಿಧಿ'ಯನ್ನು ಹೊಂದಿದೆ.

ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಣಕು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಚಟುವಟಿಕೆಗಳಿಗೆ ಹಣಕಾಸು ಪೂರೈಸುವ ಒಂದು ಅತ್ಯಂತ ಪ್ರಮುಖ ಬ್ಯಾಂಕಾಗಿದೆ. ನಬಾರ್ಡ್ ಸಂಸ್ಥೆಯು ರಾಜ್ಯದಲ್ಲಿ 2002–03 ರಲ್ಲಿ 20,615 ಲಕ್ಷ ರೂ.ಗಳನ್ನು ಸಾಲವಾಗಿ ನೀಡಿತ್ತು. 2004–05 ರ ಸಾಲಿನಲ್ಲಿ 31,414 ಲಕ್ಷ ರೂ.ಗಳನ್ನು ಸಾಲವಾಗಿ ವಿತರಿಸುವ ಗುರಿ ಹೊಂದಿತ್ತು.

**ಎ) ಸರ್ಕಾರ :–**

ಸರ್ಕಾರ ಕೆಲವು ವಿಶಷ್ಟ ಸಂಧರ್ಭಗಳಲ್ಲಿ ರೈತರಿಗೆ ಸಾಲಗಳನ್ನು ನೀಡುತ್ತದೆ. ಅದು ನೀಡುವ ಸಾಲಗಳು ಎರಡು ರೀತಿಯವು. ಅವುಗಳೆಂದರೆ

1. ಅಲ್ಪಾವಧಿ ಸಾಲ ಮತ್ತು 2. ದೀರ್ಘಾವಧಿ ಸಾಳ. ಅಲ್ಪಾವಧಿ ಸಾಲಗಳನ್ನು ಬಿತ್ತನೆ ಬೀಜಗಳು ಮತ್ತು ರಸಗೊಬ್ಬರಗಳನ್ನು ಕೊಳ್ಳಲು ಮತ್ತು ಕಾರ್ಮಿಕರಿಗೆ ವೇತನ ನೀಡಲು ಕೊಡಲಾಗುತ್ತದೆ. ದೀರ್ಘಾವಧಿ ಸಾಲಗಳನ್ನು ಕೃಷಿ ಭೂಮಿಯಲ್ಲಿ ಶಾಶ್ವತ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ನೀಡಲಾಗುತ್ತದೆ.

ಸರ್ಕಾರ ನೀಡುವ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ತಕ್ಕಾವಿ ಸಾಲಗಳೆಂದು ಕರೆಯಲಾಗುತ್ತದೆ. ಇಂತಹ ಸಾಲಗಳನ್ನು ಸರ್ಕಾರ ನೆರೆಹಾವಳಿ, ಬರಗಾಲ, ಕ್ಷಾಮ ಮುಂತಾದ ಪ್ರಕೃತಿ ವಿಕೋಪಗಳ ಸಂಧರ್ಭಗಳಲ್ಲಿ ರೈತರ ಅಸಹಾಯಕತೆಯನ್ನು ನೀಗಲು ಕೊಡಲಾಗುತ್ತದೆ. ಆದ್ದರಿಂದ ತಕ್ಕಾವಿ ಸಾಲಗಳು ಒಂದು ರೀತಿಯಲ್ಲಿ ತುರ್ತು ಸಾಲದ ಮೂಲಗಳಾಗಿವೆ. ಈ ಸಾಲಗಳನ್ನು ಅತ್ಯಂತ ಕಡಿಮೆ ಬಡ್ಡಿದರದಲ್ಲಿ ಸುಲಭ ಮರುಪಾವತಿ ಕಂತುಗಳಲ್ಲಿ ನೀಡಲಾಗುತ್ತದೆ. ಆದರೆ ಸರ್ಕಾರ ನೀಡುವ ಕೃಷಿ ಹಣಕಾಸಿನ ಸೌಲಭ್ಯ ತುಂಬಾ ಕಡಿಮೆ ಮೊತ್ತದ್ದಾಗಿದ್ದು ಅದು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಿದೆ.

# ಅಧ್ಯಾಯ–೩

## ಮಂಗಳೂರಿನ ಆಯ್ದ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕುಗಳ ಕ್ಷೇತ್ರ ಕಾರ್ಯಧಾರಿತ ಅಧ್ಯಯನ

## ಅಧ್ಯಾಯ – ೩

# ಮಂಗಳೂರಿನ ಆಯ್ದ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕು ಮತ್ತು ಸಂಘಗಳ ಕ್ಷೇತ್ರ ಕಾರ್ಯಾಧಾರಿತ ಅಧ್ಯಯನ:

**ಪೀಠಿಕೆ:–**

ದಕ್ಷಿಣ ಕನ್ನಡ ಜಿಲ್ಲೆಯ ಕರ್ನಾಟಕ ರಾಜ್ಯದ ಕರಾವಳಿ ಪ್ರದೇಶದಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರದಲ್ಲಿ ಉಡುಪಿ ಜಿಲ್ಲೆಯನ್ನು, ಈಶಾನ್ಯದಲ್ಲಿ ಚಿಕ್ಕಮಂಗಳೂರು ಜಿಲ್ಲೆಯನ್ನು, ಪೂರ್ವದಲ್ಲಿ ಹಾಸನ ಜಿಲ್ಲೆಯನ್ನು, ಆಗ್ನೇಯದಲ್ಲಿ ಕೊಡಗು ಜಿಲ್ಲೆ ಹಾಗೂ ದಕ್ಷಿಣಕ್ಕೆ ಕೇರಳದ ಕಾಸರಗೋಡು ಜಿಲ್ಲೆಗಳಿಂದ ಸುತ್ತುವರೆದಿದೆ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರವನ್ನು ಹೊಂದಿರುವ ದ.ಕ ಜಿಲ್ಲೆಯ ಮುಖ್ಯ ಪಟ್ಟಣ ಮಂಗಳೂರಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯು 4,866 ವ್ಯಾಪ್ತಿಯ ಚದರ ಕಿ.ಮೀ ವೀಸ್ತೀರ್ಣವನ್ನು ಹೊಂದಿದೆ. ಪ್ರತೀ ೧ ಚದರ ಕಿಲೋ ಮೀ ೩೯೦ ಮಂದಿ ಜನರನ್ನು ಒಳಗೊಂಡಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ೨೫೪ ಗ್ರಾಮಗಳಿವೆ. ಪ್ರಾಕೃತಿಕ ಸಂಪತ್ತುಗಳಿಂದ ನಳನಳಿಸುತ್ತಿರುವ ದಕ್ಷಿಣ ಕನ್ನಡ ಜಿಲ್ಲೆಯು 5 ತಾಲೂಕುಗಳಾಗಿ ವಿಂಗಡಿಸಲ್ಪಟ್ಟಿದೆ. ಅವುಗಳೆಂದರೆ ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ೧೯೯೭ ರಲ್ಲಿ ಅಂದರೆ ದಕ್ಷಿಣ ಕನ್ನಡ ಜಿಲ್ಲೆ ವಿಭಜನೆಗೊಳ್ಳುವುದಕ್ಕಿಂತ ಮೊದಲು ಉಡುಪಿ, ಕುಂದಾಪುರ ಹಾಗೂ ಕಾರ್ಕಳ ತಾಲೂಕುಗಳನ್ನು ಒಳಗೊಂಡಿತ್ತು. ದ.ಕ, ಉಡುಪಿ ಮತ್ತು ಕಾಸರಗೋಡಿನ ಪ್ರದೇಶಗಳಲ್ಲಿ ತುಳು ಜನರು ಆಡುವ ಭಾಷೆಯಾದ ಕಾರಣ ತುಳುನಾಡು ಎಂದು ಈಗಲೂ ಕರೆಯುವುದಿದೆ. 8 ಹಾಗೂ ೧೪ ನೇ ಶತಮಾನದಲ್ಲಿ ಅಲೂಪ ಅರಸರು ಈ ಪ್ರದೇಶವನ್ನು ಆಳಿದ್ದರೆಂದು ಈ ಕಾರಣದಿಂದ ತುಳು ಮಾತನಾಡುವ ಜನರಿರುವ ಜಿಲ್ಲೆಗಳಲ್ಲಿ ಕರ್ನಾಟಕ ರಾಜ್ಯವೂ ಒಳಗೊಂಡಿದೆ ಎನ್ನಲಾಗಿದೆ. (ವಿಕಿ. ಪಿಡಿಯ)

ಪ್ರಸ್ತುತ ಅಧ್ಯಯನವು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿಗೆ ಸೀಮಿತವಾಗಿದ್ದು ಇಲ್ಲಿ ೪ ಕೃಷಿ ಸಹಕಾರಿ ಬ್ಯಾಂಕುಗಳನ್ನು ಆಯ್ದುಕೊಳ್ಳಲಾಗಿದೆ. ದ.ಕ ಜಿಲ್ಲೆಯ ಮಂಗಳೂರು ತಾಲೂಕು ೮೩೪ ಚ.ಕಿಮೀ ವೀಸ್ತೀರ್ಣವನ್ನು ಹೊಂದಿದ್ದು ೨೦೧೧ ಜನಗಣತಿಯ ಪ್ರಾಕಾರ ೯೨೧೨೦೭ ಜನಸಂಖ್ಯೆಯನ್ನೊಳಗೊಂಡಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಂಗಳೂರು, ಬಂಟ್ವಾಳ, ಪುತ್ತೂರು, ಸುಳ್ಯಾ, ಕಡಬ, ಮೂಡಬಿದ್ರೆ, ಸುರತ್ಕಲ್, ಮುಲ್ಕಿ ಹಾಗೂ ಧರ್ಮಸ್ಥಳ ಪ್ರಮುಖ ಪಟ್ಟಣಗಳಾಗಿದ್ದು, ಕೈಗಾರಿಕೆ, ಶಿಕ್ಷಣ,

ಉದ್ಯೋಗ, ವ್ಯಾಪಾರದ ದೃಷ್ಟಿಯಿಂದ ವಿದೇಶಿಯರನ್ನು ತನ್ನತ್ತ ಸೆಳೆಯಿತ್ತಿದೆ ಮಾತ್ರವಲ್ಲ ಈ ಜಿಲ್ಲೆ ಕೆಂಪು ಮಣ್ಣಿನ ಹೆಂಚು/ ಮಘಳೂರು ಹೆಂಚು, ಗೊಡಂಬಿ, ಬ್ಯಾಂಕು ವ್ಯವಹಾರ ಶಿಕ್ಷಣ ಕೈಗಾರಿಕೆಗಳಿಗೆ ಹೆಸರಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯು ಪುರಾಣ ಪ್ರಸಿದ್ದ ಐತಿಹಾಸಿಕ ಹಿನ್ನೆಲೆಯುಳ್ಳ ಊರುಗಳನ್ನು ಹೊಂದಿದೆ. ಪ್ರಮುಖವಾದ ಊರುಗಳೆಂದರೆ ಮೂಡಬಿದ್ರೆ, ಕೃಷ್ಣಾಪುರ ಮಠ, ಧರ್ಮಸ್ಥಳ, ಕದ್ರಿ, ಉಳ್ಳಾಲ, ಕುಕ್ಕೆ ಸುಬ್ರಹ್ಮಣ್ಯ, ಮಂಗಳೂರು, ಸುಲ್ತಾನ್ ಬತ್ತೇರಿ, ಪುತ್ತೂರು, ವಿಟ್ಲ, ಉಪ್ಪಿನಂಗಡಿ, ಜಮಾಲಾಬಾದ್ ಕೋಟೆ ಇತ್ಯಾದಿ.

ಸಂಪ್ರದಾಯ ಪದ್ಧತಿ ಆಚರಣೆ ಹೀಗೆ ಸಾಂಸ್ಕೃತಿಕ ನೆಲೆವೀಡಾದ ದಕ್ಷಿಣ ಕನ್ನಡ ಜಿಲ್ಲೆಯು, ನಾಗಜೀವತೆಯ ಆರಾಧನೆ, ಭೂತರಾದನೆ, ಕಂಬಳ, ಕೋಳಿಅಂಕ ಮೊದಲಾದವುಗಳಿಗೆ ಪ್ರಾಮುಖ್ಯತೆಯನ್ನು ನೀಡಿದಿದೆ. ದಕ್ಷಿಣ ಕನ್ನಡ ಜಿಲ್ಲೆಯು ಉತ್ತಮ ರಸ್ತೆಗಳನ್ನು ಹೊಂದಿದ್ದು ಎನ್.ಎಚ್. ೧೭ ಉಡುಪಿ ಕಾರವಾರ, ಮುಂಬೈ, ಗೋವಾ, ಕೊಚ್ಚಿನ್ ಸಂಪರ್ಕ ಹೊಂದಿದ್ದಾರೆ ದಕ್ಷಿಣ ಕನ್ನಡ ವ್ಯಾಪ್ತಿಯಲ್ಲಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣ, ರೈಲು ನಿಲ್ದಾಣಗಳು, ಬಂದರುಗಳು ದೂರ ಸಂಪರ್ಕವನ್ನು ಹೊಂದಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ವೃತ್ತಿ ಕೃಷಿಯಾಗಿದ್ದು ಭತ್ತ, ಅಡಿಕೆ, ಕರಿಮೆಣಸು, ಕೋಕೋಗಳು ಪ್ರಮುಖ ಬೆಳೆಗಳಾಗಿವೆ, ಆದುದರಿಂದ ದಕ್ಷಿಣ ಕನ್ನಡ ಜಿಲ್ಲೆಯು ಬುದ್ದಿವಂತರ ಜಿಲ್ಲೆಯೆನಿಸಿದೆ. ಬುದ್ದಿವಂತರ ಜಿಲ್ಲೆಯೆನಿಸಿರಯವ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೈಕ್ಷಣಿಕ ಹಾಗೂ ಸಂಶೋಧನಾ ಸಂಸ್ಥೆಗಳೇನು ಕಮ್ಮಿಯಿಲ್ಲ.

ಕಳೆದು ಮೂರು ದಶಕಗಳಿಂದ ಭಾರತದ ಬ್ಯಾಂಕಿಗೆ ವ್ಯವಸ್ಥೆಯು ಹಲವಾರು ಸಾಧನೆಗಳನ್ನು ಹೊಂದಿದೆ. ಭಾರತದ ಹಣಕಾಸು ವ್ಯವಸ್ಥೆಯಲ್ಲಿ ಬ್ಯಾಂಕು ಪ್ರಮುಖ ಪಾತ್ರವಹಿಸಿದೆ. ಈ ಬ್ಯಾಂಕುಗಳು ಹಲವಾರು ಸೌಲಭ್ಯಗಳನ್ನು ಮತ್ತು ಅವಕಾಶಗಳನ್ನು ಗ್ರಾಹಕರಿಗೆ ನೀಡುತ್ತದೆ, ಅಲ್ಲದೆ ಬ್ಯಾಂಕ್ ಹೂಡಿಕೆ ಮತ್ತು ವಿಮಾಉತ್ಪನ್ನಗಳನ್ನು ಒದಗಿಸುತ್ತದೆ. ಕೃಷಿಗೆ ಬೇಕಾದ, ಉಪಕರಣಗಳನ್ನು, ಕ್ರಿಮಿನಾಶಕಗಳನ್ನು ಒದಗಿಸಿಕೊಡುತ್ತದೆ. ಬೆಳೆ ಸಾಲದ ಸೌಲಭ್ಯವನ್ನು ರೈತರಿಗೆ ಬಡ್ಡಿಯಿಲ್ಲದೆ ನೀಡುತ್ತದೆ ಮತ್ತು ಅತೀ ಕಡಿಮೆ ದರದಲ್ಲಿ ಸಾಲವನ್ನು ನೀಡುತ್ತದೆ ಹೀಗೆ ಗ್ರಾಹಕರ ಮತ್ತು ರೈತರ ಅಭಿವೃದ್ದಿಗಾಗಿ ಸಹಕಾರಿ ಸಂಘಗಳು ಮತ್ತು ಬ್ಯಾಂಕುಗಳ ತಮ್ಮ ನಿಸ್ವಾರ್ಥ ಸೇವೆಯನ್ನು ನೀಡುವಲ್ಲಿ ಯಶಸ್ವಿಯಾಗಿದೆ.

ಬ್ಯಾಂಕ್ ತನ್ನೆಲ್ಲಾ ಸದಸ್ಯರಿಗೆ ಹಾಗೂ ಗ್ರಾಹರಿಗೆ ಸಾರ್ಥಕ ಸೇವೆಯನ್ನು ನೀಡುತ್ತಾ ಪ್ರಗತಿ ಪಥದಲ್ಲಿ ಮುನ್ನಡೆಯುತ್ತಿದ್ದು, ಭಾರತದ ಹಣಕಾಸು ವ್ಯವಸ್ಥೆಯಲ್ಲಿ ಬ್ಯಾಂಕು ಪ್ರಮುಖ ಪಾತ್ರವಹಿಸುತ್ತದೆ. ಈ ಬ್ಯಾಂಕುಗಳು ಹಲವಾರು ಸೌಲಭ್ಯಗಳನ್ನು ಮತ್ತು ಅವಕಾಶಗಳನ್ನು ತನ್ನ ಗ್ರಾಹಕರಿಗೆ ನೀಡುತ್ತಿದೆ. ಇತರ ಬ್ಯಾಂಕಿಗೆ ಹೋಲಿಸಿದರೆ ಸಹಕಾರಿ ಬ್ಯಾಂಕುಗಳು ರೈತರಿಗೆ ಅತೀ ಕಮ್ಮಿ ಬಡ್ಡಿ ದರದಲ್ಲಿ ಸಾಲನೀಡುತ್ತಿವೆ.

ಈ ಅಧ್ಯಯನಕ್ಕೆ ಮಂಗಳೂರು ತಾಲೂಕಿನ ಕಿನ್ನಿಗೋಳಿ, ಬಜಪೆ, ಸುರತ್ಕಲ್, ಪಕ್ಷಿಕೆರೆ ಎಂಬ ನಾಲ್ಕು ಬ್ಯಾಂಕುಗಳನ್ನು ಆಯ್ದುಕೊಳ್ಳಲಾಗಿದೆ. ಹಾಗೆಯೇ ಕಿನ್ನಿಗೋಳಿ ಸೇವಾಸಹಕಾರಿ ಸಂಘ, ಎಕ್ಕಾರು ಸೇವಾ ಸಹಕಾರಿ ಸಂಘ, ಸುರತ್ಕಲ್ ಸೇವಾಸಹಕಾರಿ ಸಂಘಗಳನ್ನು ಆಯ್ದುಕೊಳ್ಳಲಾಗಿದೆ ಮತ್ತು ಇವುಗಳ ಸಂಘಟನಾತ್ಮಕ ಬೆಳವಣಿಗೆ, ಸಾಲ ನೀಡಿಕೆ, ಮತ್ತು ಮರುಪಾವತಿ, ದುಡಿಯುವ ಬಂಡವಾಳ ಲಾಭ ಮತ್ತು ಲಾಭಾಂಶ ಬಗ್ಗೆ ವಿವರವಾಗಿವಿಶ್ಲೇಷಿಸಲಾಗಿದೆ.

**೩.೧ ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್:**

ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿಯಮಿತ ೧೯೯೭-೯೮ ರಲ್ಲಿ ಅಸಿತ್ವಕ್ಕೆ ಬಂತ್ತು. ದಿವಂಗತ ಐ.ವಿ ಅಸ್ರಣ್ಣ ನವರು ಈ ಬ್ಯಾಂಕಿನ ಸ್ಥಾಪಕ ಅಧ್ಯಕ್ಷರಾಗಿದ್ದರು. ಪ್ರಸುತ್ತಾ ಈ ಬ್ಯಾಂಕಿನಲ್ಲಿ ಸದಸ್ಯರ ಸಂಖ್ಯೆ ೬೦೩೧ ಕ್ಕೂ ಹೆಚ್ಚಿದ್ದು ಸುಮಾರು ೧ ಕೋಟಿ ೧೪ ಲಕ್ಷಕ್ಕೂ ಹೆಚ್ಚೂ ಪಾಲೂ ಹಣ ಅಲ್ಲದೆ ೨೫ ಕೋಟಿ ೫ ಲಕ್ಷದಷ್ಟು ಠೇವಣಾತಿಯನ್ನು ಹೊಂದೆರಿತ್ತದೆ. ಕಿನ್ನಿಗೋಳಿ ವ್ಯವಸಾಯ ಸೇವಾಸಹಕಾರಿ ಬ್ಯಾಂಕ್ ಒಟ್ಟು ೮ ಗ್ರಾಮೀಣ ಪ್ರದೇಶಗಳನ್ನು ಒಳಗೊಂಡಿದೆ. ಬ್ಯಾಂಕಿನ ಕಾರ್ಯಾಕ್ಷೇತ್ರವು ತಾಳಿಪಾಡಿ, ಮೆನ್ನಬೆಟ್ಟು, ಕೆಮ್ರಾಲ್, ನಡುಗೋಡು, ಐಕಳ, ಕೊಂಡಿಮೂಲ, ಕೆಲೆನಜೂರು, ಅಲಿಂಗ್ ಗ್ರಾಮಗಳಿಗೆ ಸೀಮಿತವಾಗಿರುತ್ತದೆ. ಬ್ಯಾಂಕು ತನ್ನ ಕಾರ್ಯನಿರ್ವಹಿಸಲು ತನ್ನದೇ ಆದ ಸ್ವಂತ ಕಟ್ಟಡವನ್ನು ಹೊಂದಿದೆ. ಕೇಂದ್ರ ಕಛೇರಿ ಕಿನ್ನಿಗೋಳಿಯಲ್ಲಿದ್ದು, ಈ ಬ್ಯಾಂಕಿಗೆ ಎರಡು ಶಾಖೆಗಳಿವೆ. ಒಂದು ಶಾಖೆ ದಾಮಸ್ಕಟ್ಟೆಯಲ್ಲಿ ಕಾರ್ಯನಿರ್ವಹಿಸುತ್ತದೆ. ಇನ್ನೊಂದು ಶಖೆಯನ್ನು ಪಕ್ಷಿಕೆರೆಯಲ್ಲಿ ಸ್ಥಾಪಿಸಲಾಗಿದೆ. ಪಕ್ಷಿಕೆರೆ ಶಾಖೆ ಸ್ಥಾಪನೆಗೊಂಡು ೧ ೧/೨ ವರ್ಷವಾಯಿತು. ತನ್ನ ಕಾರ್ಯವನ್ನು ಎರಡು ಶಾಖೆಗಳಲ್ಲಿಉತ್ತಮ ರೀತಿಯಲ್ಲಿ ನಿರ್ವಹಿಸುತ್ತಾ ಬಂದಿವೆ. ಪ್ರಸುತ್ತಾ ಸಾಲಿನಲ್ಲಿ ಶ್ರೀ ಕೆ.ಲವ ಶೆಟ್ಟಿ ಬ್ಯಾಂಕಿನ ಅಧ್ಯಕ್ಷರಾಗಿರುತ್ತಾರೆ; ಮತ್ತು ಶ್ರೀ ಶೇಖರ ಮಾಡರವರು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಆಗಿದ್ದು ಒಟ್ಟು ೧೮ ಮಂದಿ ಸಿಂಬ್ಬಂಧಿಗಳು ಬ್ಯಾಂಕಿನ ಸರ್ವತೋಮುಖ ಅಭಿವೃದ್ದಿಗಾಗಿ ದುಡಿಯುತ್ತಿದ್ದಾರೆ. ಬ್ಯಾಂಕಿನ ಸಿಬ್ಬಂಧಿಗಳನ್ನು ನೇಮಿಸುವುದು ಮತ್ತು ಆಯ್ಕೆಮಾಡುವುದು ನೇರ ಆಯ್ಕಾ ವಿಧಾನದಿಂದ

ಮತ್ತು ಗ್ರಾಮದೊಳಗೆ ವಾಸಮಾಡುವ ಜನರು ಈ ಚುಣಾವಣೇಗೆ ಅರ್ಹರಾಗಿರುತ್ತಾರೆ ಅಂತವರನ್ನು ಚುಣಾವಣೆಯ ಮೂಲಕ ನೇಮಿಸುತ್ತಾರೆ.



**ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಸಂಘ:–**

ಪ್ರಸ್ತುತ ಸಾಲಿನಲ್ಲಿ ಗ್ರಾಹಕರ ವಿಭಾಗದಲ್ಲಿ ಶ್ರೀ ರಾಜೇಂದ್ರ್ ತಮ್ಮ ನಿಸ್ವಾರ್ಥ ಸೇವೆ ಸಲ್ಲಿಸುತ್ತಾ ಇದ್ದಾರೆ, ರಸಗೊಬ್ಬರ, ಬಿತ್ತನೆಬೀಜ, ಕೀಟನಾಶಕ ಕೃಷಿಗೆ ಬೇಕಾದ ಉಪಕರಣಗಳು, ವಿತರಿಸುವುದು ಉದಾ: ಹಾರೆ. ಇದರ ಸಂಪೂರ್ಣ ಜವಜ್ದಾರಿಯನ್ನು ಶ್ರೀ ಸದಾನಂದಾವರು ನಿರ್ವಹಿಸುತ್ತಾ ಬಂದಿದ್ದಾರೆ. ಇಲ್ಲಿ ಅಕ್ಕಿ, ಗೋಧಿ, ಸಕ್ಕರೆ, ಸೀಮೆಎಣ್ಣೆ ಮುಂತಾದವು ಜನರಿಗೆ ಸಬ್ಸಿಡಿ ದರದಲ್ಲಿ ಗ್ರಾಹಕರಿಗೆ ಮತ್ತು ರೈತರಿಗೆ ನೀಡಲಾಗಿದೆ. ಸಹಕಾರಿ ಸಂಘಗಳು ಕೃಷಿ ಹನಕಾಸಿನ ಪ್ರಮುಖ ಮೂಲವಾಗಿದೆ. ಗ್ರಾಮೀಣ ಋಣಭಾರವನ್ನು ತಗ್ಗಿಸಿ ಜನರಲ್ಲಿ ಉಳಿತಾಯ ಪ್ರವತ್ತಿಯನ್ನು ಬೆಳೆಸುವುದು ಸಹಕಾರಿ ಸಂಘಗಳ ಸ್ಥಾಪನೆಯ ಮೂಲ ಉದ್ದೇಶ, ಕುಟುಂಬದ ಆದಯ, ಸವಲತ್ತು, ಜಾಗ ಮುಂತಾದವುಗಳ ಅಭಾರದ ಮೇಲೆ ೩ ರೀತಿಯ ಕಾರ್ಡ್‌ಗಳಿವೆ. ಅನ್ನಭಾಗ್ಯ ಕಾರ್ಡ್, ಅಹ್ಯೋದಯ ಕಾರ್ಡ್ ಮತ್ತು ಎ.ಪಿ.ಎಲ್ ಕಾರ್ಡ್ ಕಿನ್ನಿಗೋಳಿ ವ್ಯವಸಾಯ ಸೇವಾಸಹಕಾರಿ ಬ್ಯಾಂಕ್ ದಾಮಸ್ಕಟ್ಟೆ ಶಖೆ ಅಕ್ಟೋಬರ್ ೨೬.೧೯೬೬ ರಲ್ಲಿ ಅಸ್ತಿತ್ವಕ್ಕೆ ಬಂತ್ತು. ಮುಖ್ಯ ಉದ್ದೇಶ ಜನರ ಸರ್ವತೋಮುಖ ಅಭಿವೃದ್ಧಿ ಪ್ರಸುತ್ತ ಸಾಲಿನಲ್ಲಿ ಶ್ರೀಮತಿ ಗ್ಲಾಡಿಸ್ ಸಿಕ್ವೇರಾ ಮುಖ್ಯಕಾರ್ಯ ನಿರ್ವಾಹಣಾಧಿಕಾರಿ ಆಗಿದ್ದು ಒಟ್ಟು ೩ ಮಂದಿ ಸಿಬ್ಬಂಧಿಗಳು ಸಹಕಾರಿ ಸಂಘದಲ್ಲಿ ಕಾರ್ಯನಿರ್ವಹಿಸುತ್ತಾರೆ. ಇಲ್ಲಿ ಅಕ್ಕಿ, ಗೋಧಿ, ಸಕ್ಕರೆ, ಸೀಮೆಎಣ್ಣೆ, ರಾಸಗೊಬ್ಬರಗಳು, ಕೀಟನಾಶಕಗಳು, ಕೃಷಿಗೆ ಬೇಕಾದ ಸಲಕರಣೆಗಳು (tools) ಜನರಿಗೆ ಸಬ್ಸಿಡಿ ದರದಲ್ಲಿ ಸಿಗುತ್ತದೆ.

**ಪಡಿತರ ಚೀಟಿ:–**

ಮೂರು ರೀತಿಯ ಕಾರ್ಡುಗಳಿವೆ, ಅನ್ನಭಾಗ್ಯ ಕಾರ್ಡು; ಅಂತ್ಯೋದಯ ಕಾರ್ಡು (ಕಡು ಬಡವದವರಿಗೆ) ಮತ್ತು APL ಕಾರ್ಡು(Above poverty line) ಅನ್ನಭಾಗ್ಯ ಕಾರ್ಡು ಜನರಿಗೆ ಒಂದು ಕೆ.ಜಿ ಸಕ್ಕರೆಯನ್ನು ರೂಪಾಯಿ ೧೩ ದರದಲ್ಲಿ ನೀಡಲಾಗುವುದು. ಅಕ್ಕಿ ೩೦ ಕೆ.ಜಿ ರೂಪಾಯಿ ೧ ದರದಲ್ಲಿ, ಸೀಮೆಎಣ್ಣೆ ೫ ಲೀಟರ್ ೧೭ ೧/೨

ರೂಪಾಯಿ ದರದಲ್ಲಿ ನೀಡಲಾಗುವುದು.

**ಅಂತ್ಯೋದಯ ಕಾರ್ಡು ಜನರಿಗೆ ಆಗುವ ಉಪಯೋಗಗಳು:–**

- **೨೯** ಕೆ.ಜಿ ಅಕ್ಕಿಯನ್ನು ಕೇವಲ ೧ ರಪಾಯಿ ದರದಲ್ಲಿ ಜನರಿಗೆ ನೀಡಲಾಗುವುದು.
- **೬** ಕೆ,ಜಿ ಗೋಧಿಯನ್ನು ಕೇವಲ ೧ ರೂಪಾಯಿ ದರದಲ್ಲಿ

- ೧೯ ಲೀಟರ್ ಸೀಮೆಎಣ್ಣೆ ರೂಪಾಯಿ ೧೭ ದರದಲ್ಲಿ
- ೧ ಕೆ.ಜಿ ಸಕ್ಕರೆ ರೂಪಾಯಿ ೧೩ ರಿಂದ ೫೦ ದರದಲ್ಲಿ

ಸಹಕಾರಿ ಬ್ಯಾಂಕಿನ ಉದ್ದೇಶ ಜನರ ಸರ್ವತೋಮುಖ ಅಭಿವೃದ್ಧಿ ಇಲ್ಲಿ ಕೇವಲ ಶ್ರೀಮಂತರಿಗೆ; ಮಧ್ಯಮದ ವರ್ಗದ ಜನರಿಗೆ ಸಾಲದ ಸೌಲಭ್ಯವನ್ನು ಕೊಎಉವುದಲ್ಲದೇ, ಬಡತನ ರೇಖೆಗಿಂತ ಕೆಳಗಿನ ಜನರಿಗೆ ಸಾಲದ ಸೌಲಭ್ಯವನ್ನು ಒದಗಿಸಿಕೊಡಲಾಗಿದೆ. ಸಮಾಜದ ಎಲ್ಲಾ ವರ್ಗದ ಜನರಿಗೆ ಸಾಲದ ಸೌಲಭ್ಯವನ್ನು ಒದಗಿಸಿಕೊಡುತ್ತದೆ. ಎಲ್ಲಾ ವರ್ಗದ ಜನರ ಬೇಡಿಕೆ, ನೋವು ನಲಿವುಗಳಿಗೆ ಸ್ಪಂದಿಸುವ ಹೊಣೆಗಾರಿಕೆ ಈ ಬ್ಯಾಂಕಿನ ಮೂಲ ಉದ್ದೇಶವಾಗಿದೆ. ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕಿನಲ್ಲಿ ಒಟ್ಟು ೩ ರೀತಿಯ ಠೇವಣಿ ಸಂಚಯನ ಸೌಲಭ್ಯವಿದೆ, ನಿರಕು ಠೇವಣಿ, ಉಳಿತಾಯ ಖಾತೆ ಮತ್ತು ಮಾಸಿಕಠೇವಣಿ. ಈ ಬ್ಯಾಂಕಿನಲ್ಲಿ ೨ ವಿಧದ ಸಾಲದ ಸೌಲಭ್ಯವಿದೆ. (ಅ) ಮಧ್ಯಾವಧಿ ಕೃಷಿ ಸಾಲ (ಆ) ಮಂಗಳ ಕಿಸಾನ್‌ಕ್ರೆಡಿಟ್ ಕಾರ್ಡು (ಬೆಳೆಸಾಲ). ಮಧ್ಯಾವಾಧಿ ಕೃಷಿ ಸಾಲವನ್ನು ೩% ಬಡ್ಡಿದರದಲ್ಲಿ ರೈತರಿಗೆ ನೀಡಲಾಗುತ್ತದೆ. ೫ ವರ್ಷದ ಅವಧಿ ಐದು ವರ್ಷದ ಅವಧಿಯೊಳಗೆ ಅವರು ಸಾಲವನ್ನು ಮರುಪಾವತಿ ಮಾಡಬೇಕು ಇಲ್ಲದಿದ್ದರೆ ಬಡ್ಡಿ ಜಾಸ್ತಿಯಾಗುತ್ತದೆ. ಮಂಗಳ ಕಿಸಾನ್ ಕ್ರೆಡಿಟ್ ಕಾರ್ಡು (ಬೆಳೆಸಾಲ) ಬಡ್ಡಿ ಇಲ್ಲದೆ ರೈತರಿಗೆ ಸಾಲವನ್ನು ಒದಗಿಸಿಕೊಡುತ್ತಾರೆ. ೧ ವರ್ಷದ ಅವಧಿಗೆ ಸೀಮಿತಗೊಳ್ಳುತ್ತದೆ. ೧೩

ವರ್ಷದ ಒಳಗೆ ಅವರು ಸಾಲವನ್ನು ಮರುಪಾವತಿ ಮಾಡಬೇಕು. ರೈತರಿಗೆ ಮತ್ತು ಗ್ರಾಹಕರಿಗೆ ಸಾಲದ ಸೌಲಭ್ಯವನ್ನು ಒಂದು ನಿರ್ದಿಷ್ಟ ಆಧಾರದ ಮೇಲೆ ಬ್ಯಾಂಕು ಸಾಲದ ಸೌಲಭ್ಯವನ್ನು ಕೊಡುತ್ತದೆ. ಉದಾಹರಣೆಗೆ: ಆಸ್ತಿಪತ್ರ, ಸಾಲದ ಮರುಪಾವತಿ ದಿನದಂದು ಆಸ್ತಿಪತ್ರವನ್ನು ಹಿಂದೆಕೊಡುತ್ತಾರೆ, ಹಾಗೇಯೇ ವಾಹನ ಖರೀದಿಸಲು, ಸಾಲದ ಸೌಲಭ್ಯವನ್ನು ಕೊಡುತ್ತಾರೆ. ಆಭರಣದ ಮೇಲೆ ಸಾಲದ ಸೌಲಭ್ಯವನ್ನು ಕೊಡುತ್ತಾರೆ. ಒಬ್ಬ ವ್ಯಕ್ತಿ ಬ್ಯಾಂಕಿನ ಸದಸ್ಯನಾಗಲೂ ರೂ. ೧೦೦ ನ್ನು ಉಳಿತಾಯ ಠೇವಣಿಯಲ್ಲಿರಬೇಕು. ಆಗ ಮಾತ್ರ ಅವನು ಬ್ಯಾಂಕಿನ ಸದಸ್ಯನಾಗಲು ಅರ್ಹನಾಗಿರುತ್ತಾನೆ. ನಿರಕು ಠೇವಣಿ ಸದಸ್ಯನಾಗಲು ರೂ ೫೦೦ ನ್ನು ಪಾವತಿಸಬೇಕು.

ನಾವು ಠೇವಣಿ ಮಾಡಿ ಹಣಕ್ಕೆ ಈ ಕೆಳಗಿನಂತೆ ಬಡ್ಡಿ ನೀಡಲಾಗುವುದು.

| ನಿರಕು ಠೇವಣಿ | | ಹಿರಿಯನಾಗರಿಕರಿಗೆ |
|---|---|---|
| ೩ ರಿಂದ ೫ ತಿಂಗಳು | ೭.೫೦% | ೮.೦೦% |
| ೬ ರಿಂದ ೧೧ ತಿಂಗಳು | ೮.೭೫% | ೯.೨೫% |
| ೧೨ ರಿಂದ ೨೪ ತಿಂಗಳು | ೧೦.೦೦% | ೧೦.೫೦% |
| ೨೪ ರಿಂದ ಮೇಲ್ಪಟ್ಟು | ೧೦.೫೦% | ೧೧.೦೦% |

ಸಂಚಯನಖಾತೆ ೪% ಬಡ್ಡಿಯನ್ನು ಕೊಡಲಾಗುವುದು.

❖ **ಬ್ಯಾಂಕಿನ ಇತರ ಚಟುವಟಿಕೆಗಳು:-**

- ರೈತರಿಗೆ ಮತ್ತು ಗ್ರಾಹಕರಿಗೆ ಸಾಲದ ಸೌಲಭ್ಯವನ್ನು ದೊರಕಿಸಿಕೊಡುತ್ತದೆ
- ಮೂರು ರೀತಿಯ ಠೇವಣಿ ಸಂಚಯನವಿದೆ. ಉಳಿತಾಯಖಾತೆ, ನಿರಕು ಠೇವಣಿಖಾತೆ, ಮಾಸಿಕಖಾತೆ
- ಜನರು ತಮಗೆ ಯಾವುದೇ ಖಾತೆಯಲ್ಲಿ ತಮ್ಮ ಹಣವನ್ನು ಜಮಾಮಾಡಬಹುದು.
- ಮನೆ ಕಟ್ಟಲು, ವಾಹನ ಖರೀದಿಸಲು, ಮದುವೆಮಾಡಲು ಹಣವನ್ನು ನೀಡಲಾಗುವುದು.
- ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು, ರೈತರಿಗೆ ಬೇಕಾದ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘವಾಧಿ ಸಾಲದ ಸೌಲಭ್ಯವನ್ನು ದೊರಕಿಸಿಕೊಡುತ್ತಾರೆ.\
- ಕೃಷಿಗೆ ಸಂಬಂಧಪಟ್ಟ ಕೃಷಿ ಉಪಕರಣಗಳು, ಪಂಪ್‌ಸೆಟ್, ಟಿಲ್ಲರ್, ಬಿತ್ತನೆಬೀಜ, ರಸಗೊಬ್ಬರಗಳು, ಕೀಟನಾಶಕಗಳು ರೈತರಿಗೆ ಕೊಡುತ್ತಾರೆ
- ೮ ಗ್ರಾಮದೊಳಗೆ ಬರುವ ಎಲ್ಲಾ ಶಾಲೆಗಳಲ್ಲಿ ಇರುವ ತೀರಾ ಬಡಮಕ್ಕಳಿಗೆ ಪುಸ್ತಕಗಳನ್ನು ವಿತರಿಸಲಾಗುವುದು.
- ರೇಶನ್ ಸೌಲಭ್ಯವನ್ನು ಜನರಿಗೆ ನೀಡುತ್ತಾರೆ.
- ಶೇ. ೨ ಬಡ್ಡಿದರದಲ್ಲಿ ಕೃಷಿ ಸಾಲವನ್ನು ನೀಡುತ್ತಾರೆ
- ಬೆಳೆಸಾಲವನ್ನು ಬಡ್ಡಿಯಿಲ್ಲದೆ ರೈತರಿಗೆ ನೀಡುತ್ತಾರೆ (ಮಂಗಳ ಕಿಸಾನ್ ಕಾರ್ಡು)
- ರೈತಕೂಟ ಎಂಬ ಸಂಘವನ್ನು ಸ್ಥಾಪಿಸಿದ್ದಾರೆ; ಇದರ ಸದಸ್ಯತ್ವವನ್ನು ಪಡೆಯಬೇಕಾದರೆ ಅವರು ಬ್ಯಾಂಕಿನ ೮ ಗ್ರಾಮದೊಳಗೆ ವಾನಮಾಡಬೇಕು ರೈತಕೂಟವೆಂದರೆ "ಬ್ಯಾಂಕಿನ

ಕಾರ್ಯ ವಾಪ್ತಿ ಬರುವಂತಹ ರೈತ ಸದಸ್ಯರ ಒಂದು ಸಮಿತಿ" ಇದರಿಂದಾಗುವ ಪ್ರಯೋಜನವೇನೆಂದರೆ ಸದಸ್ಯರಿಗೆ ಇರುವ ಸಮಸ್ಯೆ ಕುಂದುಕೊರತೆಗಳನ್ನು ಹೇಳಬಹುದು, ಮತ್ತು ಸಮಸ್ಯೆಗೆ ಸೂಕ್ತ ಪರಿಹಾರವನ್ನು ನೀಡಲಾಗುವುದು

- ಯಶಸ್ವಿನಿ ಯೋಜನೆ ಕಾರ್ಯರೂಪದಲ್ಲಿದೆ. ಇದರಿಂದ ರೈತರಿಗೆ ಎನಾದರೂ ಅವಗಢ ಸಂಧರ್ಭದಲ್ಲಿ ಚಿಕಿತ್ಸೆ ಮಾಡಲಿಕ್ಕೆ ಇದ್ದರೆ ಆಸ್ಪತ್ರೆಯ ಅರ್ಧದಷ್ಟು ಖರ್ಚು ಅವರಿಗೆ ಯಶಸ್ವಿನಿ ಯೋಜನೆಯ ಮುಖಾಂತ್ರ ಸಿಗುತ್ತದೆ.
- ಆಭರಣದ ಮೇಲೆ ಸಾಲದ ಸೌಲಭ್ಯ ಮತ್ತು ನಿರಲು ಠೇವಣಿ ಖಾತೆಯ ಸೌಲಭ್ಯವನ್ನು ಆ ಪ್ರದೇಶದಲ್ಲಿ ಬರುವ ಜನರಿಗೆ ಒದಗಿಸಿಕೊಡುತ್ತಾರೆ.
- ಸ್ವಸಹಾಯ ಗುಂಪು: ಬ್ಯಾಂಕಿನ ವತಿಯಿಂದ 8 ಗ್ರಾಮದೊಳಗೆ ಬರುವ ಲೇವಾ ಬಡತನದ ರೇಶೆಯಲ್ಲಿರುವ ಸದಸ್ಯರಲ್ಲಿ ಉಳಿತಾಯ ಮನೋಭಾವನೇ ಸೃಷ್ಟಿಸುವುದಕ್ಕೋಸ್ಕರ ವ್ಯವಸಾಯ ಸಂಘವನ್ನು ಸ್ಥಾಪಿಸಿದ್ದಾರೆ.
- ಕುಡಿಯುವ ನೀರಿನ ವ್ಯವಸ್ಥೆಯಲ್ಲಿ ಒದಗಿಸಿಕೊಟ್ಟಿದ್ದಾರೆ.
- ಸಂಸ್ಥೆಯ ವತಿಯಿಂದ ಆರ್ಥಿಕ ನೆರವಿನ ಸೌಲಭ್ಯವಿದೆ.
- ಬ್ಯಾಂಕು ತನ್ನ ಎಲ್ಲಾ ವ್ಯವಹಾರವನ್ನು ಗಣಯಂತ್ರದ ಮೂಲಕವೇ ಕಾರ್ಯ ನಿರ್ವಹಿಸುತ್ತದೆ.
- ಭದ್ರತಾ ಕೊಠಡಿಯ ಸೌಲಭ್ಯವಿದೆ.

**೩.೨ ಪಕ್ಷಿಕೆರೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿಯಮಿತ:**

ಕಿನ್ನಿಗೋಳಿಯ ಇನ್ನೊಂದು ಶಾಖೆ ನವೆಂಬರ್ **೧೬ ೨೦೧೩**ರಂದು ಅಸ್ತಿತ್ವಕ್ಕೆ ಬಂತ್ತು. ಪ್ರಸ್ತುತ ಸಾಲಿನಲ್ಲಿ ಶ್ರೀ ವಿವೇಕಾನಂದ ಮ್ಯಾನೇಜರಾಗಿ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾ ಬಂದಿದ್ದಾರೆ. ಇವರಿಗೆ ಸಹಕರಿಸಲು ಹಬಿಬುಲ್ಲಾಹ ಎಟಂಡರ್ ಆಗಿ ತಮ್ಮ ಕೆಲಸವನ್ನು ನಿರ್ವಹಿಸುತ್ತಾರೆ.

**ಠೇವಣಿ:–**

- ನಿರಕು ಠೇವಣಿ
- ಉಳಿತಾಯ ಖಾತೆ
- ಮಾಸಿಕ ಠೇವಣಿ

ಮೂರು ರೀತಿಯ ಠೇವಣಿ ಸೌಲಭ್ಯವಿದೆ. ಸಾಲ ರಿಕವರಿ ೧೦೦% ಬ್ಯಾಂಕಿನ ಎಲ್ಲಾ ವ್ಯವಹಾರವನ್ನು ಗಣಕಯಂತ್ರದ ಮೂಲಕವೇ ಮಾಡಲಾಗುವುದು. ಪ್ರಸ್ತುತ ಸಾಲಿನಲ್ಲಿ ಶೇಕಡ ೫ ಲಕ್ಷದಷ್ಟು ಲಾಭಾಂಶ ಈ ಬ್ಯಾಂಕಿಗೆ ಆಗಿದೆ. ವ್ಯವಹಾರ ದಿನದಿಂದ ದಿನಕ್ಕೆ ಜಾಸ್ತಿಯಾಗುತ್ತಾ ಹೋಗುತ್ತದೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಜನರು ಬ್ಯಾಂಕಿನ ಮೇಲೆ ಇಟ್ಟ ವಿಶ್ವಾಸ ಮತ್ತು ಬ್ಯಾಂಕಿನ ಕಾರ್ಯಚಟುವಟಿಕೆಗಳ ಬಗ್ಗೆ ಅವರಲ್ಲಿ ಇರುವ ಅಭಿಮಾನ ಕಾರಣವಾಗುತ್ತದೆ. ಈ ಬ್ಯಾಂಕು ಜನರಿಗೆ ಸಾಲದ ಸೌಲಭ್ಯವನ್ನು ಒಬಗಿಸಿಕೊಡುತ್ತದೆ. ಉದಾಹರಣೆಗೆ; ಮಧ್ಯಮಾವಧಿ ಸಾಲ, ಅಲ್ಪಾವಧಿ ಸಾಲ, ವಾಹನಗಳನ್ನು ಖರೀದಿ ಮಾಡಲು ಸಾಲ, ಆಭರಣದ ಮೇಲೆ ಸಾಲದ ಸೌಲಭ್ಯವನ್ನು ನೀಡುತ್ತದೆ. ಸುಮಾರು ಒಂದುವರೆ ವರ್ಷದಲ್ಲಿ ೮೨ ಲಕ್ಷ ಠೇವಣಿ, ಉಳಿತಾಯ ಖಾತೆ ೩೩ ಲಕ್ಷ, ಮಾಸಿಕ ಠೇವಣಿ ೨ ಲಕ್ಷ ಮತ್ತು ಆಭರಣದ ಮೇಲೆ ಸಾಲ ಶೇಕಡ ೬೫ ಲಕ್ಷದಷ್ಟು ಮತ್ತು ೪೫೮ ಮಂದಿ ಸದಸ್ಯರು ಜ್ಯುವೆಲರಿ ಸಾಲವನ್ನು ಪಡೆದಿರುತ್ತಾರೆ. ಹಾಗೆಯೇ ಮಧ್ಯಾಮಾವಧಿ ಮತ್ತು ಅಲ್ಪಾವಧಿ ಸಾಲ ಸುಮಾರು ೬೦ ಮಂದಿ ಸದಸ್ಯರು ಪಡೆದಿರುತ್ತಾರೆ. ಬ್ಯಾಂಕಿನಲ್ಲಿ ಭದ್ರಾತಾ ಕೊಠಡಿಯ ಸೌಲಭ್ಯವಿದೆ.

**ಬ್ಯಾಂಕಿನ ಇತರ ಚಟುವಟಿಕೆಗಳು:-**

- ಠೇವಣಿ ಸೌಲಭ್ಯ
- ಸಾಲದ ಸೌಲಭ್ಯ ಅತೀ ಕಡಿಮೆ ಬಡ್ಡಿದರದಲ್ಲಿ ಗ್ರಾಹಕರಿಗೆ ಮತ್ತು ರೈತರಿಗೆ ನೀಡಲಾಗುತ್ತದೆ. ವಾಣಿಜ್ಯ ಬ್ಯಾಂಕಿಗೆ ಹೋಲಿಸಿದರೆ ಬಡ್ಡಿದರ ತುಂಬಾ ಕಡಿಮೆ.
- ಸ್ವಸಹಾಯ ಗುಂಪುಗಳನ್ನು ಬ್ಯಾಂಕಿನ ಮೂಲಕವೇ ರಚನೆಗೊಂಡಿದೆ. ಪಕ್ಷಿಕೆರೆಯಲ್ಲಿ ೨೫ ಸ್ವಸಹಾಯ ಗುಂಪುಗಳಿವೆ. ಇದರ ಮುಖ್ಯ ಉದ್ದೇಶ ತೀರಾ ಬಡತನ ಡೇಖೆಯಲ್ಲಿರುವ ಸದಸ್ಯರಲ್ಲಿ ಯಳಿತಾಯ ಮನೋಭಾವನೆಯನ್ನು ಬಿತ್ತಬಹುದು. ಹಾಗೆಯೇ ಸಾಲದ ಸೌಲಭ್ಯವನ್ನು ಒದಗಿಸಿಕೊಡಲಾಗುವುದು.
- ಸಂಸ್ಥೆಯ ಅಂದರೆ ಬ್ಯಾಂಕಿನ ವತಿಯಿಂದ ರೈತರಿಗೆ ಅನಾರೋಗ್ಯ ಸಂದರ್ಭದಲ್ಲಿ ಆರ್ಥಿಕ ನೆರವಿನ ಸೌಲಭ್ಯವನ್ನು ದೊರಕಿಸಿಕೊಡಲಾಗುವುದು.
- ಬ್ಯಾಂಕಿನ ಕಾರ್ಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಶಾಲೆಗಳಲ್ಲಿ ಇರುವ ತೀರಾ ಬಡಮಕ್ಕಳಿಗೆ ಪುಸ್ತಕ ವಿತರಿಸಲಾಗುವುದು.

- ಯಶಸ್ವಿನಿ ಯೋಜನೆರೈತರಿಗೆ ಏನಾದರು ಅಪಘಾತವಾದರೆ ಅಥವಾ ಹೃದಯ ಚಿಕಿತ್ಸೆ ಸಂದರ್ಭದಲ್ಲಿ ಅಸ್ಪತ್ರೆಯ ಅರ್ಧದಷ್ಟು ಹಣವನ್ನು ಸರಕಾರದ ಈ ಯೋಜನೆಯ ಮುಖಾಂತ್ರ ರೈತರಿಗೆ ದೊರಕಿಸಿಕೊಡಲಾಗುವುದು. ಈ ಪ್ರಯೋಜನವನ್ನು ಬ್ಯಾಂಕಿನ ಕಾರ್ಯಕ್ರಮದಲ್ಲಿ ಬರುವ ಎಲ್ಲಾ ಜನರು ಈ ಯೋಜನೆಯ ಸೌಲಭ್ಯವನ್ನು ಪಡೆಯಬಹುದು.
- ರೈತಕೂಟ ಎಂಬ ಸಂಘವನ್ನು ಬ್ಯಾಂಕಿನ ಮೂಲಕ ರಚನೆಗೊಂಡಿದೆ. ರೈತಕೂಟವೆಂದರೆ ಬ್ಯಾಂಕಿನ ಕಾರ್ಯ ವ್ಯಾಪ್ತಿಯಲ್ಲಿ ಬರುವಂತಹ ರೈತ ಸದಸ್ಯರ ಒಂದು ಸಮಿತಿ.

**೩.೩ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿಯಮಿತ:-**

ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿಯಮಿತ ೧೯೫೬ ರಲ್ಲಿ ಅಸ್ತಿತ್ವಕ್ಕೆ ಬಂದಿತು. ಪ್ರಸ್ತುತ ಸಾಲಿನಲ್ಲಿ ಶ್ರೀ ಮೋನಪ್ಪ ಶೆಟ್ಟಿ ಅಧ್ಯಕ್ಷರಾಗಿ, ಪ್ರಧಾನ ವ್ಯವಸ್ಥಾಪಕರಾಗಿ ಶ್ರೀ ರತ್ನಾಕರ ಶೆಟ್ಟಿ ತಮ್ಮ ಕಾರ್ಯ ನಿರ್ವಹಿಸುತ್ತಾ ಬಂದಿದ್ದಾರೆ. ಬಜಪೆ ವ್ಯವಸಾಯ ಸೇವಾಸಹಕಾರಿ ಬ್ಯಾಂಕು ಒಟ್ಟಿಗೆ ಈಗ ೭ ಗ್ರಾಮಗಳನ್ನೊಳಗೊಂಡಿದೆ. ಬ್ಯಾಂಕಿನ ಕೇಂದ್ರ ಕಛೇರಿ ಬಜಪೆಯಲ್ಲಿದ್ದು ಬ್ಯಾಂಕಿನ ಆಡಳಿತ ಮಂಡಳಿಯು ಒಂಭತ್ತು ನಿರ್ದೇಶಕರನ್ನು ಹೊಂದಿದ್ದು ಈ ಪೈಕಿ ಒಬ್ಬರು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಪ್ರತಿನಿಧಿ ಸಾಗಿರುವರು. ವರದಿ ವರ್ಷದಲ್ಲಿ ೧೫ ಬಾರಿ ಆಡಳಿತ ಮಂಡಳಿಯ ಸಭೆಯು ಜರಗಿರುತ್ತದೆ. ಈ ಬ್ಯಾಂಕಿಗೆ ೩ ಶಾಖೆಗಳಿವೆ. ಜೋಕಟ್ಟೆ, ಕಿನ್ನಿಕಂಬಳ, ಎಕ್ಕಾರು. ಶ್ರೀ ಯಶೋಧರಾ ಕಿನ್ನಿಕಂಬಳದಲ್ಲಿ ಮ್ಯಾನೆಜರಾಗಿ, ಎಕ್ಕಾರು ಅನುಪಮ ಮತ್ತು ಜೋಕಟ್ಟೆ ಪ್ರವಪ್ಪ ತಮ್ಮ ಕಾರ್ಯ ನಿರ್ವಹಿಸುತ್ತಿದ್ದಾರೆ. ಕರ್ನಾಟಕ ರಾಜ್ಯ ಸಹಕಾರಿ ಆಪೆಕ್ಸ್ ಬ್ಯಾಂಕಿನಿಂದ ೨೦೧೦-೧೧ ಸಾಲಿಗೂ ಉತ್ತಮ ಕಾರ್ಯ ನಿರ್ವಹಣೆಗಾಗಿ ರಾಜ್ಯ ಪ್ರಶಸ್ತಿಯನ್ನು ಬಜಪೆ ವ್ಯವಸಾಯ ಸೇವಾಸಹಕಾರಿ ಬ್ಯಾಂಕ್ ಪಡೆದಿರುತ್ತದೆ.. ಹಾಗೆಯೇ ದ.ಕ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನಿಂದ ೨೦೧೧-೧೨ ನೇ ಸಾಲಿಗೂ ಅತ್ಯುತ್ತಮ ಪ್ರಾಥಮಿಕ ಕೃಷಿ ಸಹಕಾರಿ ಬ್ಯಾಂಕ್ ಪ್ರಶಸ್ತಿಯನ್ನು ಪಡೆದುಕೊಂಡಿದೆ. ಈ ಪ್ರಶಸ್ತಿಯನ್ನು ಸತತವಾಗಿ ಬಜಪೆ ಬ್ಯಾಂಕು ಪಡೆದುಕೊಂಡು ಬಂದಿದೆ. ಇದು ಬ್ಯಾಂಕಿನ ಒಂದು ಮಹತ್ವದ ಸಾಧನೆಯಾಗಿದೆ. ಪ್ರಸ್ತುತ ಈ ಬ್ಯಾಂಕಿನಲ್ಲಿ ಸದಸ್ಯರ ಸಂಖ್ಯೆ ೭೮೦೯ ಕ್ಕೂ ಹೆಚ್ಚಿದ್ದು ಸುಮಾರು ೧೨ ಕೋಟಿ ೮೪ ಲಕ್ಷದಷ್ಟು ಪಾಲು ಬಂಡವಾಳ ಮತ್ತು ಠೇವಣಿ ೧೧೫ ಕೋಟಿ ಹೊಂದಿರುತ್ತದೆ. ಬ್ಯಾಂಕಿಗೆ ಪ್ರಸ್ತುತ ೨೦೧೩ ಸಾಲಿನಲ್ಲಿ ಒಟ್ಟು ೩.೭೫ ಕೋಟಿ ಲಾಭಾಂಶ ದೊರಕಿದೆ. ವ್ಯವಹಾರದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಗುತ್ತದೆ. ಬ್ಯಾಂಕಿನ ನೌಕರರಿಗೆ ಬೋನಸ್ಸ್ ಸೌಲಭ್ಯವನ್ನು ಕೊಡುತ್ತಾರೆ.

ಕೃಷಿ ಮತ್ತು ಇತರ ಉದ್ದೇಶಗಳಿಗೆ ಸಾಲ ನೀಡುವುದಲ್ಲದೆ ರೈತರಿಗೆ ಕೃಷಿ ಉಪಕರಣಗಳು, ರಾಸಾಯನಿಕ ಗೊಬ್ಬರಗಳನ್ನು ಮಿತದರದಲ್ಲಿ ಒದಗಿಸಲಾಗುವುದು. ಬಜಪೆ, ಎಕ್ಕಾರು ಮತ್ತು ಪೆರ್ಮುದೆ ಗ್ರಾಮಸ್ಥರಿಗೆ ನ್ಯಾಯ ಬೆಲೆಯ ಪಡಿತರ ಪದಾರ್ಥಗಳನ್ನು ಕರಿಟ್ರೋಲ್ಡ್ ಬಟ್ಟೆಗಳನ್ನು ಇತರ ಗ್ರಹೋಪಯೋಗಿ ಸಾಮಾಗ್ರಿಗಳನ್ನು ವಿತರಣೆ ಮಾಡಲಾಗುತ್ತದೆ. ಎಕ್ಕರು, ಜೋಕಟ್ಟೆಯಲ್ಲಿ ಮತ್ತು ಕಿನ್ನಿಕಂಬಳದಲ್ಲಿ ಶಾಖೆಗಳನ್ನು ತೆರೆದು ಬ್ಯಾಂಕಿಂಗ್ ಸೌಲಭ್ಯವನ್ನು ಒದಗಿಸಲಾಗಿದೆ. ಬ್ಯಾಂಕಿನ ಎಲ್ಲಾ ಹಣಕಾಸಿನ ವ್ಯವಹಾರವನ್ನು ಗಣಕಯಂತ್ರದ ಮುಖಾಂತ್ರವೇ ಮಾಡಲಾಗುವುದು. ೨೦೧೩ ರ ಸಾಲಿನಲ್ಲಿ ಬ್ಯಾಂಕಿನ ಕಾರ್ಯಕ್ಷೇತ್ರದ ಎಲ್ಲಾ ಕನ್ನಡ ಮಾಧ್ಯಮ ಶಾಲೆಯ ಆರ್ಥಿಕವಾಗಿಹಿಂದುಳಿದ ಸುಮಾರು ೮೦೦ ವಿಧ್ಯಾರ್ಥಿಗಳಿಗೆ ಉಚಿತ ಪುಸ್ತಕ ವಿತರಣೆ ಮಾಡಲಾಗಿದೆ. ಬ್ಯಾಂಕಿನ ಸೇವೆಯು ಅಪರಿಮಿತವಾಗಿದ್ದು ಇದರಿಂದ ಜನರಿಗೆ ಒಳ್ಳೆಯ ಸೌಲಭ್ಯಗಳು ಮತ್ತು ಪ್ರಯೋಜನಗಳು ಲಭ್ಯವಾಗಿವೆ.

ಬ್ಯಾಂಕಿನಲ್ಲಿ ಮೂರು ರೀತಿಯ ಠೇವಣಿ ಸಂಚಯನವಿದೆ.

- ನಿರಕು ಠೇವಣಿ – ೧೦.೫೦% ಬಡ್ಡಿ
- ಉಳಿತಾಯ ಖಾತೆ – ೩.೫% ಬಡ್ಡಿ
- ಚಾಲ್ತಿ ಖಾತೆ

ಸಾಲದ ಸೌಲಭ್ಯವನ್ನು ಗ್ರಾಹಕರಿಗೆ ಒದಗಿಸಿಕೊಡುತ್ತಾರೆ. ಉದಾಹರಣೆಗಾಗಿ; ಮನೆಕಟ್ಟಲು ಸಾಲ, ಮದುವೆ ಮಾಡಲು, ವಾಹನ ಖರೀದಿಸಲು ಸಾಲ, ಚಿನ್ನಾಭರಣಗಳ ಮೇಲೆ ಸಾಲವನ್ನು ನೀಡಲಾಗುವುದು.

**ಯಶಸ್ವಿನಿ ರೈತರ ವಿಮಾ ಯೋಜನೆ:**

ಕರ್ನಾಟಕ ಸರ್ಕಾರದ ಯಶಸ್ವಿನಿ ರೈತರ ವಿಮಾ ಯೋಜನೆ ಬ್ಯಾಂಕಿನ ಸದಸ್ಯರಿಗೆ ಅನುಷ್ಠಾನಗೊಳಿಸಿದ್ದು, ಈ ವೆರೆಗೆ ಸುಮಾರು ೩೦೦೦ ಕ್ಕಿಂತ ಹೆಚ್ಚಿನ ರೈತ ಸದಸ್ಯರು ಈ ಯೋಜನೆಯ ಸದಸ್ಯತ್ವವನ್ನು ಪಡೆದಿದ್ದು ಈ ಯೋಜನೆಯಡಿಯಲ್ಲಿ ಈಗಾಗಲೇ ಕೆಲವು ಸದಸ್ಯರು ಶಸ್ತ್ರಚಿಕಿತ್ಸೆ ಮಾಡಿಸಿಕೊಂಡಿದ್ದು, ಸುಮಾರು ೬೫ ಲಕ್ಷದಷ್ಟು ಹಣವನ್ನು ಸರ್ಕಾರವು ಒದಗಿಸಿಕೊಟ್ಟಿದೆ.

ಸ್ವಸಹಾಯ ಗುಂಪುಗಳು ಬ್ಯಾಂಕಿನ ಮೂಲಕವೇ ರಚನೆಗೊಂಡಿದೆ. ಈ

ಬ್ಯಾಂಕಿನಡಿಯಲ್ಲಿ ಸುಮಾರು ೨೫೦ ಗುಂಪುಗಳು, ಗುಂಪಿನ ಸದಸ್ಯರಿಗೆ ೪% ಬಡ್ಡಿದರದಲ್ಲಿ ಬ್ಯಾಂಕು ಒದಗಿಸಿಕೊಡುತ್ತದೆ.

**ಕೃಷಿಗೆ ಸಂಬಂಧಿಸಿದಂತೆ ಇರಡು ರೀತಿಯ ಸಾಲ ಸೌಲಭ್ಯಗಳು:**

- MTAP (medium Term Agricultureal Loan) ೩% ಬಡ್ಡಿ
- Crop loan 0% ದರದಲ್ಲಿ ಸಾಲವನ್ನು ರೈತರಿಗೆ ನೀಡಲಾಗುವುದು. Crop loan (ಬೆಳೆಸಾಲವನ್ನು) ಒಂದು ವರ್ಷದ ಅವಧಿಗೆ ನೀಡಲಾಗುವುದು. ಸಾಲವನ್ನು ರೈತರು ಒಂದು ವರ್ಷದೊಳಗೆ ಮರುಪಾವತಿ ಮಾಡದಿದ್ದರೆ, ೧೩% ರಷ್ಟು ಬಡ್ಡಿಯನ್ನು ವಿಧಿಸಲಾಗುವುದು.

**ಬ್ಯಾಂಕಿನ ಇತರ ಚಟುವಟಿಕೆಗಳು:–**

೧. ಗ್ರಾಹಕರಿಗೆ ಮತ್ತು ರೈತರಿಗೆ ಸಾಲದ ಸೌಲಭ್ಯ

೨. ಯಶಸ್ವಿನಿ ರೈತರ ವಿಮಾ ಯೋಜನೆ

೩. ಭದ್ರತಾ ಕೊಠಡಿಯ ಸೌಲಭ್ಯ

೪. ಸ್ವಸಹಾಯ ಗುಂಪುಗಳನ್ನು ಬ್ಯಾಂಕಿನ ಮೂಲಕವೇ ದಚನೆಗೊಂಡಿದೆ.

೫. ಕುಡಿಯುವ ನೀರಿನ ಸೌಲಭ್ಯ ಜನರಿಗೆ ಒದಗಿಸಿಕೊಡಲಾಗಿದೆ.

೬. ಬ್ಯಾಂಕಿನ ಕಾರ್ಯವ್ಯಾಪ್ತಿಯಲ್ಲಿ ಬರುವ ೩೨ ಶಾಲೆಗಳಲ್ಲಿ ಕಲಿಯುತ್ತಿರಯವ ತೀರಾ ಬಡ ರೈತರ ಮಕ್ಕಳಿಗೆ ಶಿಕ್ಷಣವೇತನದ ಸೌಲಭ್ಯ ಕೊಡಲಾಗಿದೆ. ೨ ೧/೨ ಲಕ್ಷದಷ್ಟು ಹಣವನ್ನು ಈ ಯೋಜನೆಗಾಗಿ ಮೀಸಲಾಗಿದೆ.

೭. ಬ್ಯಾಂಕಿನ ನೌಕರರಿಗೆ ಬೋನಸ್ಸ್ ಸೌಲಭ್ಯವನ್ನು ಕೊಡುತ್ತಾರೆ.

೮. ೨೦೧೩ ಸಾಲಿನಲ್ಲಿ ಬ್ಯಾಂಕಿನ ಕಾರ್ಯಕ್ಷೇತ್ರದ ಎಲ್ಲಾ ಕನ್ನಡ ಮಾಧ್ಯಮ ಶಾಲೆಯ ಆರ್ಥಿಕವಾಗಿ ಹಿಂದುಳಿದ ಸುಮಾರು ೮೦೦ ವಿಧ್ಯಾರ್ಥಿಗಳಿಗೆ ಉಚಿತ ಪುಸ್ತಕ ವಿತರಣೆ

೯. ಬ್ಯಾಂಕಿನ ಕಾರ್ಯವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿನ ಜನರನ್ನು ಉತ್ತೇಜಿಸಲು ಕ್ರೀಡೆಗಳನ್ನು ಮತ್ತು ಪ್ರತೀಭಾಕಾರಂಜಿಯನ್ನು ಮತ್ತು ಇನ್ನಿತ್ತರ ಸ್ಪರ್ಧೆಗಳನ್ನು ಏರ್ಪಡಿಸಲಾಗುವುದು.

೧೦. ಬ್ಯಾಂಕಿನ ವತಿಯಿಂದ ರೈತರಿಗೆ ಅನಾರೋಗ್ಯ ಸಂಧರ್ಭದಲ್ಲಿ ಆರ್ಥಿಕ ನೆರವಿನ ಸೌಲಭ್ಯವನ್ನು ದೊರಕಿಸಿಕೊಡಲಾಗುವುದು.

**೩.೪ ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್:-**

ಸುರತ್ಕಲ್ ವ್ಯವಸಾಯ ಸೇವಾಸಹಕಾರಿ ಬ್ಯಾಂಕ್ ೧೯೧೨ ರಲ್ಲಿ ಅಸ್ತಿತ್ವಕ್ಕೆ ಬಂತು. ಪ್ರಸ್ತುತ ಸಾಲಿನಲ್ಲಿ ಶ್ರಿ.ಕೆ ದಾಮೋದರ ಶೆಟ್ಟಿ ಅಧ್ಯಕ್ಷರಾಗಿ ಮತ್ತು ಶ್ರೀ ಅಶೋಕ್ ಶೆಟ್ಟಿ ಉಪಾಧ್ಯಕ್ಷರಾಗಿ ತಮ್ಮ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಶ್ರೀ ನರಸಿಂಹ.ಕೆ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿ ತಮ್ಮ ನಿಸ್ವಾರ್ಥ ಸೇವೆಯನ್ನು ಮಾಡುತ್ತಿದ್ದಾರೆ.

ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ಒಟ್ಟು ೧೦ ಗ್ರಾಮಗಳನ್ನು ಒಳಗೊಂಡಿದೆ. ಬ್ಯಾಂಕಿನ ಕಾರ್ಯಕ್ಷೇತ್ರವು ಸುರತ್ಕಲ್, ಇಡ್ಯಾ, ಹೊಸಬೆಟ್ಟು, ಕುಳಾಯಿ, ಬೈಕಂಪಾಡಿ, ಪಣಂಬೂರು, ತಣ್ಣೀರುಭಾವಿ, ಕುತ್ತೆತ್ತೂರು ಸೂರಿಂಜೆ ಮತ್ತು ಮಧ್ಯ ಗ್ರಾಮಗಳಿಗೆ ಸೀಮಿತವಾಗಿರುತ್ತದೆ. ಈ ಬ್ಯಾಂಕಿಗೆ ಒಟ್ಟು ಐದು ಶಾಖೆಗಳನ್ನು ಸುರತ್ಕಲ್, ಕುಳಾಯಿ, ಕುತ್ತೆತ್ತುರು, ಸೂರಿಂಜೆ ಮತ್ತು ಮಧ್ಯ ಮೂರು ರೀತಿಯ ಠೇವಣಿ ಸಂಚಯನವಿದೆ. ಅವುಗಳೆಂದರೆ ಉಳಿತಾಯ ಖಾತೆ ೪% ಬಡ್ಡಿದರ, ನಿರಕುಠೇವಣಿ ಶೇಕಡ ೫.೫% ನಿಂದ ೧೦.೭೫% ಬಡ್ಡಿದರ, ಮತ್ತು ಮಾಸಿಕ ಠೇವಣಿ ಶೇಕಡ ೮.೫% ಬಡ್ಡಿದರ ಜನರು ತಮ್ಮ ಹಣವನ್ನು ಠೇವಣಿ ಸಂಚಯನದಲ್ಲಿ ಶ್ರಮ ಮಾಡಬಹುದು. ಸುರತ್ಕಲ್ ಪ್ರದೇಶವನ್ನು ಆವರಿಸಿಕೊಂಡಿರುವ ವಿಶೇಷ ಆರ್ಥಿಕ ವಲಯದಲ್ಲಿ ಕೇವಲ ಕೈಗಾರಿಕರಣಕ್ಕೆ ಪ್ರಾಮುಖ್ಯತೆ ನೀಡದೆ ಕೃಷಿ ವಲಯಕ್ಕೆ ಪ್ರಾಧಾನ್ಯತೆ ನೀಡಿದೆ. ಕೃಷಿ ಕಾರ್ಮಿಕರ ಕೊರತೆಯನ್ನು ನೀಗಿಸಲು ಆಧುನಿಕ ತಂತ್ರಜ್ಞಾನಗಳ ಬಳಕೆಯನ್ನು ಮಾಡಲಾಗಿದೆ. ಉಳಲು ಡಿಲ್ಲರ್, ಕಟಾವು ಮಾಡಲು ಕಟಾವು ಯಂತ್ರಗಳನ್ನು ಬಳಕೆ ಮಾಡಲಾಗುತ್ತದೆ. ಮೊದಲು ಕೃಷಿಕರು ಸಂಪ್ರದಾಯಕ ಕೃಷಿ ಪದ್ದತಿಯನ್ನು ಅಳವೆಇಸಿಕೊಂಡಿದ್ದರು. ಉದಾಹರಣೆಗೆ; ನೇಗಿಲು, ಇದರಿಂದ ಉತ್ಪಾದನೆ ಹೆಚ್ಚಾಗುತ್ತಿರಲಿಲ್ಲ. ಆಧುನಿಕ ತಂತ್ರಾಜ್ಞಾನ ಬಳಸುವುದರಿಂದ ಉತ್ಪಾದನೆಯ ಮಟ್ಟದಲ್ಲಿ ವ್ಯತ್ಯಾಸವನ್ನು ಕಾಣಬಹುದು. ಬ್ಯಾಂಕಿನ ಲಾಭ ವರ್ಷದಿಂದ ವರ್ಷಕ್ಕೆ ದ್ವಿಗುಣಗೊಳ್ಳುತ್ತಾ ಬಂದಿದೆ. ೧೯೧೨ ರಲ್ಲಿ ಸುರತ್ಕಲ್ ಸಹಕಾರಿ ಸಂಘವೆಂಬ ನಾಮಕರಣದಿಂದ ಆರಂಭವಾದ ಈ ಸಂಗದ ಶತಮಾನೋತ್ಸವ ದಿನಾಂಕ ೩೦-೧೨-೨೦೧೨ ರಂದು ಸಂಭ್ರಮದಿಂದ ಆಚರಿಸಲಾಯಿತು.

**ಬ್ಯಾಂಕಿನ ಇತರ ಚಟುವಟಿಕೆಗಳು:-**

೧. ಸಂಘದ ಅರ್ಹ ಸದಸ್ಯರಿಗೆ ವೈದ್ಯಕೀಯ ಚಿಕಿತ್ಸೆಗಳಿಗೆ ಆರ್ಥಿಕ ನೆರವು ಸೌಲಭ್ಯವಿದೆ.

೨. ಯಶಸ್ವಿನಿ ಯೋಜನೆಯನ್ವಯ ಶಸ್ತ್ರಚಿಕಿತ್ಸೆ ವೆಚ್ಚವನ್ನು ಸರ್ಕಾರದಿಂದ ದೊರಕಿಸಿಕೊಡುವಲ್ಲಿ ಬ್ಯಾಂಕಿನ ಪಾತ್ರ ಮಹತ್ವವಾದದ್ದು.

೩. ಸದಸ್ಯರ ಆರ್ಥಿಕ ಅವಶ್ಯಗಳಿಸುವುದು ಸಾರವಾಗಿ ಸ್ಪರ್ಧಾತ್ಮಕ ಬಡ್ಡಿದರದಲ್ಲಿ ಅಲ್ಪಾವಧಿ

ಸಾಲಗಳಾದ ಇತರ ಉದ್ದೇಶಿತ ಸಾಲಗಳು, ಕೃಷಿ ಸಾಲಗಳು ಅಥವಾ ಆಭರಣ ಈಡಿನ ಸಾಲಗಳಲ್ಲದೆ, ಮಧ್ಯಮಾವಧಿ ಸಾಲಗಳಾದ ಹೈನುಗಾರಿಕೆ, ಗ್ರಹ ನಿರ್ಮಾಣ ಸಾಲಗಳು ಭೂಅಡಮಾನ ಸಾಲಗಳು, ವಾಹನ ಖರೀದಿಸಲು ಬ್ಯಾಂಕು ಸಾಲದ ಸೌಲಭ್ಯವನ್ನು ಗ್ರಾಹಕರಿಗೆ ನೀಡುತ್ತಾ ಬಂದೊದ್ದಾರೆ.

೪. ಪರಿಸರದಲ್ಲಿರುವ ರಾಷ್ಟ್ರೀಕೃತ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಪೈನಾನ್ಸ್ ಕಂಪೆನಿಗಳು ಇದ್ದರು. ಕೃಷಿ ಸಹಕಾರಿ ಸಂಘಗಳು ಮತ್ತು ಬ್ಯಾಂಕುಗಳು ಗರಿಷ್ಟ ಪ್ರಮಾಣದಲ್ಲಿ ಸಾಲವನ್ನು ನೀಡಲಾಗಿದೆ.

೫. ಸಂಘದ ನವೋದಯ ಸ್ವಸಹಾಯ ಗುಂಪುಗಲನ್ನು ರಚಿಸಿ ಸದಸ್ಯರಲ್ಲಿ ಉಳಿತಾಯ ಮನೋಭಾವ ಬೆಳೆಸಿ ಸ್ವ-ಉದ್ಯೋಗ ಮೂಲಕ ತಯಾರಿಸಿದ ವಸ್ತುಗಳಿಗೆ ಮಾರುಕಟ್ಟೆ ಒದಗಿಸಲಾಗಿದೆ. ಒಟ್ಟು ೨೬ ಗುಂಪುಗಳಿವೆ.

೬. ಬ್ಯಾಂಕಿನ ಸಿಂಬಂಧಿಗಳಿಗೆ ವೇತನವಲ್ಲದೆ ಸರ್ಕಾರವು ತನ್ನ ನೌಕರರಿಗೆ ನೀಡುವ ಎಲ್ಲಾ ಆರ್ಥಿಕ ಅಔಲಭ್ಯಗಳನ್ನು ನೀಡುವುದರ ಜೊತೆಗೆ ವೈದ್ಯಕೀಯ ಚಿಕಿತ್ಸೆಗಳಿಗೆ ನೆರವು ನೀಡಲಾಗಿದೆ.

೭. ಗ್ರಹ ನಿರ್ಮಾಣ ಮತ್ತಿತರ ಅಗತ್ಯ ಕಾರ್ಯಗಳಿಗೆ ಅವರ ಬೇಡಿಕೆಗಳಿಗನುಸಾರವಾಗಿ ಸಾಲಗಳನ್ನು ಬ್ಯಾಂಕಿನ ನೌಕರರಿಗೆ ನೀಡಲಾಗಿದೆ.

೮. ಸಂಘವು ಅಂದರೆ ಬ್ಯಾಂಕುಗಳಿಸಿದ ನಿರ್ವಳ ಲಾಭ ವಿಂಗಡನೆಯಲ್ಲಿ ೨ ತಿಂಗಳ ವೇತನದಷ್ಟು ಬೋನಸ್ ಸೌಲಭ್ಯವನ್ನು ಬ್ಯಾಂಕಿನ ನೌಕರರಿಗೆ ನೀಡಲಾಗಿದೆ.

೯. ಬ್ಯಾಂಕಿನ ಕೇಂದ್ರ ಕಚೇರಿಯು ಸುರತ್ಕಲ್ಲಿದ್ದು ಕಚೇರಿಯಲ್ಲಿ ವ್ಯವಸ್ಥಿತ ಗಣಕೀಕರಣ ಪದ್ಧತಿಯನ್ನು ಅಳವಡಿಸಿಕೊಂಡಿದೆ.

೧೦. ಭದ್ರತಾ ಕೊಠಡಿಯ ಸೌಲಭ್ಯವಿದೆ.

೧೧. ಸುರತ್ಕಲ್, ಕುಳಾಯಿ, ಮಧ್ಯ, ಸೂರಿಂಜೆ ಹಾಗೂ ಕುತ್ತೆತ್ತೂರು ಮಾರಾಟ ವಿಭಾಗ ಮಳಿಗೆಗಳನ್ನು ಹೊಂದ್ದಿದ್ದು ಪಡಿತರ ವಿತರಣೆ, ನಾಡ ದೋಶಗಳಿಗೆ ಸೀಮೆಎಣ್ಣೆ ಹಾಗೂ ಇತರ ಜೀವನವಶ್ಯಕ ದವಸಾಧಾನ್ಯಗಳನ್ನು ಮಾರಾಟ ಮಾಡಲಾಗುತ್ತದೆ.

೧೨. ಸುರತ್ಕಲ್ ಹಾಗೂ ಕುಳಾಯಿ ಬ್ಯಾಂಕಿಂಗ್ ವಿಭಾಗಗಳಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಾಣಾ ಯೋಜನೆಯನ್ನು ಜಾರಿಗೆ ತರಲಾಗಿದ್ದು ಪ್ರತೀ ವರ್ಷ ೧೦೦೦ ಜನರು ಈ ಯೋಜನೆಯಡಿಯಲ್ಲಿ ನೋಂದಾವಣೇಗೊಂಡಿರುತ್ತಾರೆ ಮತ್ತು ಸುಮಾರು ೧೦೦ ಕ್ಕಿಂತಲೂ ಅಧಿಕ ಮಂದಿ ಈ ಯೋಜನೆಯ ಪ್ರಯೋಜನ ಪಡೆದಿರುತ್ತಾರೆ.

ಪ್ರತೀ ವರ್ಷ ಗಾಂಧಿಜಯಂತಿಯ ಶುಭ ದಿನದಂದು ಆರ್ಥಿಕವಾಗಿ ಹಿಂದುಳಿದ ಸದಸ್ಯರ ಮಕ್ಕಳಿಗೆ ವಿದ್ಯಾರ್ಥಿವೇತನ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾ ಬಂದಿದೆ.

ಸಹಕಾರದ ಆಡಳಿತವನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಸಂಘನಾತ್ಮವಾಗಿ ಉತ್ತಮವಾಗಿರಬೇಕು. ಈ ನಿಟ್ಟಿನಲ್ಲಿ ಕೃಷಿ ಸಹಕಾರಿ ಸರ್ಕಾರಿ ಬ್ಯಾಂಕಿನ ಪಾಲು, ಬಂಡವಾಳ ಸದಸ್ಯರ ಸಂಖ್ಯೆ ಠೇವಣಿ, ವಿವರವನ್ನು ಇಲ್ಲಿ ವಿಶ್ಲೇಶಿಸಲಾಗಿದೆ.

**ಸದಸ್ಯರು:**

ಸಹಕಾರಿ ಬ್ಯಾಂಕ್ ಸ್ವಯಂ ಪ್ರೇರಿತ ಮತ್ತು ಮುಕ್ತ ಸಂಘವನ್ನು ಹೊಂದಿರುತ್ತದೆ. ಸದಸ್ಯರ ಸೇವೆ ಸಹಕಾರದ ಮುಖ್ಯ ಗುರಿಯಾಗಿದೆ. ಕಳೆದ ಮೂರು ವರ್ಷಗಳಲ್ಲಿ ಸದಸ್ಯತನದ ಬಗ್ಗೆ ಆದ ಬೆಳವಣಿಗೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ಗಮನಿಸಬಹುದು.

೩.೧

| ವರ್ಷ | ಬಜಪೆ ವ್ಯವಸಾಯ ಸೇವಾಸಹಕಾರಿ ಬ್ಯಾಂಕು | ಕಿನ್ನಿಗೋಳಿ ವ್ಯವಸಾಯ ಸೇವಾಸಹಕಾರಿ ಬ್ಯಾಂಕು | ಸುರತ್ಕಲ್ ವ್ಯವಸಾಯ ಸೇವಾಸಹಕಾರಿ ಬ್ಯಾಂಕು |
|---|---|---|---|
| ೨೦೧೦–೧೧ | ೬೯೨೬ | ೫೨೨೮ | ೪೦೪೪ |
| ೨೦೧೧–೧೨ | ೭೩೩೫ | ೫೮೭೨ | ೪೧೧೫ |
| ೨೦೧೨–೧೩ | ೭೮೦೯ | ೬೦೩೯ | ೪೨೩೦ |

**ಸದಸ್ಯರ ವಿವರ**




**ಮೂಲ:– ಬ್ಯಾಂಕಿನ ವಾರ್ಷಿಕ ವರದಿ**

ಈ ಮೇಲಿನ ಕೋಷ್ಟಕದಲ್ಲಿ ಗಮನಿಸಬಹುದಾದ ವಿಷಯವೇನೆಂದರೆ ಬ್ಯಾಂಕಿನ ಸದಸ್ಯರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಏರಿಕೆಯಾಗುತ್ತಾ ಹೋಗುತ್ತದೆ. ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕು ೨೦೧೦–೧೧ ರಲ್ಲಿ ಕೇವಲ ೪೦೪೪ ಸದಸ್ಯರನ್ನು ಹೊಂದಿದ್ದು ೨೦೧೨–೧೩ ರಲ್ಲಿ ಸದಸ್ಯರ ಸಂಖ್ಯೆ ೪೨೩೦ ಏರಿಕೆಯಾಗಿದೆ. ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕು ೨೦೧೦–೧೧ ರಲ್ಲಿ ೫೨೨೮ ಸದಸ್ಯರನ್ನು ಹೊಂದಿದ್ದು ೨೦೧೨–೧೩ ರಲ್ಲಿ ಸದಸ್ಯತ್ವವನ್ನು ಹೊಂದೊದೆ ಎಂದು ಈ ಮೇಲಿನ ನಕ್ಷೆಯಲ್ಲಿ ಗಮನಿಸಬಹುದು. ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕು ೨೦೧೦–೧೧ ರಲ್ಲಿ ೬೯೨೬ ಸದಸ್ಯರನ್ನು ಹೊಂದಿದ್ದು ೨೦೧೨–೧೩ ರಲ್ಲಿ ೭೮೦೯ ಸದಸ್ಯರನ್ನು ಹೊಂದಿದೆ.

**ಠೇವಣಿ:–**

ಸಹಕಾರಿ ಬ್ಯಾಂಕುಗಳು ಸದಸ್ಯರಿಂದಲೂ ಮತ್ತು ಇತರ ಮೂಲದಿಂದಲೂ ಠೇವಣಿಗಳನ್ನು ಸಂಗ್ರಹಿಸಯತ್ತದೆ. ತನ್ನ ಕಾರ್ಯ ಚಟುವಡಿಕೆಗಳನ್ನು ನಡೆಸಲು ಹಲವು ಯೋಜನೆಗಳನ್ನು ಅನುಷ್ಠಾನಗೊಳಿಸಲು ಹಾಗು ಆರ್ಥಿಕ ಭದ್ರತೆಗಾಗಿ ಠೇವಣಿಯ ಅಗತ್ಯವಾಗಿರುತ್ತದೆ.

೩.೨

| ಠೇವಣಿ | ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ | ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ | ಬಜ್ಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ |
|---|---|---|---|
| ೨೦೧೦-೧೧ | ೧೯.೧೧ | ೨೩.೩೯ | ೭೫.೨೯ |
| ೨೦೧೧-೧೨ | ೨೧.೩೬ | ೨೯.೧೬ | ೯೧.೭೪ |
| ೨೦೧೨-೧೩ | ೨೫.೩೦ | ೩೮.೫೪ | ೧೧೫.೬೧ |
| ೨೦೧೩-೧೪ | ೩೦.೦೦ | ೪೭.೦೦ | ೧೩೫.೦೦ |




ವರ್ಷ

ಮೂಲ: ಬ್ಯಾಂಕಿನ ವಾರ್ಷಿಕ ವರದಿ

**ಸಾಲಗಳು:-**

ಕೃಷಿ ವ್ಯವಸಾಯ ಸೇವಾಸಹಕಾರಿ ಬ್ಯಾಂಕು ತನ್ನ ರೈತರುಗೆ ಮತ್ತು ಗ್ರಾಗಕರಿಗೆ ಸಾರಿದ ಸೌಲಭ್ಯವನ್ನು ದೊರಕಿಸಿಕೊಡುತ್ತದೆ. ಬ್ಯಾಂಕಿನ ನಿಗದಿತ ಚಟುವಟಿಕೆಗಳಲ್ಲಿ ಸಾಲ ನೀಡುವ ಮತ್ತು ಮರುಪಾವತಿಸುವ ಪ್ರಕ್ರಿಯೆಗೆ ಪ್ರತ್ಯಕ್ಷ ಸ್ಥಾನವಿದೆ. ಸಾಲನೀಡಿಕೆಯ ವಿವರಗಳ ವಿಶ್ಲೇಷಣೆಯಲ್ಲಿ ಸಾಲದ ಉದ್ದೇಶ, ಅವಧಿ ಬಡ್ಡಿದರ ಫಲಾನುಭವಿಗಳ ಆಯ್ಕೆ ಪ್ರಮುಖ ಅಂಶಗಳು ಸಾಲ ನೀಡಿಕೆಯ ಪಕ್ರಿಯಿಯಲ್ಲಿ ಸಾಲ ಪಡೆಯುವವ ಸಲ್ಲಿಸಬೇಕಾದ ದಾಖಲೆಗಳ ವಿವರಗಳು, ಆಧಾರ ಪತ್ರಗಳು ಸಾಕ್ಷಿಗಳೆಲ್ಲದ್ದಕ್ಕೂ ವಿಶೇಷ ಮಹತ್ವವಿದೆ. ಸಾಲ ಮರುಪಾವತಿಯ ಸದಸ್ಯರ ಪ್ರಾಮಣಿಕತೆಯನ್ನು ಬ್ಯಾಂಕಿನ ದಕ್ಷತೆಯನ್ನು ತಿಳಿದು ಪಡಿಸುವ ವಿಷಯಗಳಿವೆ.

ಈ ಹಿನ್ನಲೆಯಲ್ಲಿ ನಮ್ಮ ಅಧ್ಯಯನದ ಬ್ಯಾಂಕುಗಳ ಸಾಲ ನೀಡಿಕೆ ಮತ್ತು ಮರುಪಾವತಿಯ ವಿಧಾನಗಳನ್ನು ವಿವರಿಸುವಾಗ ತಪ್ಪಿದಾಯಕ ಅಂಶಗಳು ಗೋಚರಿಸುತ್ತವೆ.

೩.೩

| ಮರುಪಾವತಿಯ ವರ್ಷ | ಕಿನ್ನಿಗೋಳಿ ವ್ಯವಸಾಯ ಸೇವಾಸಹಕಾರಿ ಬ್ಯಾಂಕು | ಸುರತ್ಕಲ್ ವ್ಯವಸಾಯ ಸೇವಾಸಹಕಾರಿ ಬ್ಯಾಂಕು | ಬಜಪೆ ವ್ಯವಸಾಯ ಸೇವಾಸಹಕಾರಿ ಬ್ಯಾಂಕು |
|---|---|---|---|
| ೨೦೧೦-೧೧ | ೧೨ | ೧೯ | ೪೮ |
| ೨೦೧೧-೧೨ | ೧೪ | ೨೭ | ೬೫ |
| ೨೦೧೨-೧೩ | ೧೯ | ೩೭ | ೯೩ |
| ೨೦೧೩-೧೪ | ೨೧ | ೩೮ | ೧೦ |

ಮೂಲ: ಬ್ಯಾಂಕಿನ ವಾರ್ಷಿಕ ವರಧಿ

ಸಾಲಗಳ ವಿವರ




**೩.೪ ಪಾಲು ಬಂಡವಾಳ**

ಯಾವುದೇ ಒಂದು ಸಂಸ್ಥೆ/ಕಂಪೆನಿಯ ಷೇರುಗಳ ಒಟ್ಟು ಮೌಲ್ಯವನ್ನು ಬಂಡವಾಳ ಎಂದು ಕರೆಯಲಾಗುತ್ತದೆ. ಬ್ಯಾಂಕಿನ ಬೆಳವಣಿಗೆಯಲ್ಲಿ ಪಾಲುಬಂಡವಾಳವು ಮಹತ್ವದ್ದಾಗಿದೆ.

ಪಾಲು ಬಂಡವಾಳ ವಿವರ:

| ವರ್ಷ | ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ | ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ |
|---|---|---|
| ೨೦೧೦-೨೦೧೧ | ೧,೦೮೮೦೧೩೦.೦೦ | ೭,೯೭,೪೧,೫೦೦.೦೦ |
| ೨೦೧೧-೨೦೧೨ | ೧,೧೩,೦೦,೫೮೦.೦೦ | ೧೦,೪೩,೧೩,೯೫೦ |
| ೨೦೧೨-೨೦೧೩ | ೧,೧೪,೨೭,೬೮೦.೦೦ | ೧೨,೭೮,೪೭,೪೨೦ |
| ೨೦೧೩-೨೦೧೪ | ೧,೮೦,೦೦,೦೦೦.೦೦ | ೧೪,೦೦,೦೦,೦೦೦ |




ಮೇಲಿನ ಕೋಷ್ಟಕದಂತೆ ಕಂಡು ಬರುವ ವಿಷಯವೇನೆಂದರೆ ಬಜಪೆ ಬ್ಯಾಂಕಿನ ಪಾಲು ಬಂಡವಾಳವು ಕಿನ್ನಿಗೋಳಿ ಬ್ಯಾಂಕಿಗಿಂತ ಅಧಿಕವಾಗಿದೆ. ಕಿನ್ನಿಗೋಳಿಯಲ್ಲಿ ಪಾಲುಬಂಡವಾಳದ ಪ್ರಗತಿಯನ್ನು ವರ್ಷದಿಂದ ವರ್ಷಕ್ಕೆ ಜಾಸ್ತಿಯಾಗುವುದನ್ನು ಗಮನಿಸಬಹುದು.

ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕು

ಪಾಲು ಬಂಡವಾಳ (ಮೊಬಲಗು ಸಾವಿರಗಳಲ್ಲಿ) ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿಬ್ಯಾಂಕ್ ೨೦೧೧ರಲ್ಲಿ ೮೯,೯೦೪, ೨೦೧೨ರಲ್ಲಿ ೯೫೨೧, ೨೦೧೨ರಲ್ಲಿ ೯೬೬೮ ಮತ್ತು ೨೦೧೪ರಲ್ಲಿ ೯೬ಲಕ್ಷಕ್ಕಿಂತ ಹೆಚ್ಚಿದಾಗಿದೆ

❖ ಕೃಷಿ ಬ್ಯಾಂಕಿನ ಚಟುವಟಿಕೆಗಳು ಇನ್ನಷ್ಟು ಪರಿಣಾಮಕಾರಿಯಾಗಲು ಸದಸ್ಯರು ನೀಡಿದ ಸಲಹೆಗಳು:

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಫಲಾನುಭವಿಗಳನ್ನು ಸಂದರ್ಶಿಸಿದಾಗ ಅವರು ನೀಡುವ ಕೆಲವೊಂದು ಸಲಹೆಗಳು ಈ ಕೆಳಗಿನಂತಿವೆ.

- ರೈತರಿಗೆ ಉತ್ತಮ ರೀತಿಯ ಬೀಜಗಳು ಒದಗಿಸುವುದು
- ರೈತಕೂಟಗಳ ಮೂಲಕ ರೈತರಿಗೆ ಸರಿಯಾದ ಕೃಷಿ ಮಾಹಿತಿ ನೀಡುವುದು.
- ಸಾಲ ವಿತರಣೆಯ ಸೌಲಭ್ಯ ಹೆಚ್ಚಳಗೊಳಿಸುವುದು.
- ಕೃಷಿಕರಿಗೆ ಇನ್ನೂ ಹೆಚ್ಚಿನ ವೈಜ್ಞಾನಿಕ ಕ್ರಮವನ್ನು ಜರುಗಿಸುವುದು.
- ಸ್ವಾಸಯ ಗುಂಪುಗಳಿಗೆ ಹೆಚ್ಚು ಪ್ರಾಶ್ಚಯತ್ಯವನ್ನು ನೀಡುವುದು

❖ **ಕ್ಷೇತ್ರಕಾರ್ಯದ ಮಾಹಿತಿ ವಿಶ್ಲೇಷಣೆ.**

ನಮ್ಮ ಅಧ್ಯಯನದ ಈ ಅಧ್ಯಾಯವು ಪ್ರಧಾನವಾಗಿ ಕ್ಷೇತ್ರ ಕಾರ್ಯವನ್ನು ಅವಲಂಬಿಸಿರುತ್ತದೆ ಫಲನುಭವಿಗಳು ಕೊಟ್ಟ ಮಾಹಿತಿಯನ್ನು ಸಮಗ್ರವಾಗಿ ವಿಶ್ಲೇಷಿಸಿದಾಗ ನಾಲ್ಕು ಬ್ಯಾಂಕುಗಳ ಮತ್ತು ಸಂಘಗಳ ಕಾರ್ಯಕ್ಷೇತ್ರದಲ್ಲಿ ಉಂಟಾದ ಬದಲಾವಣೆಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ನಮ್ಮ ಅಧ್ಯಯನದಲ್ಲಿ ತಿಳಿಯುವಂತೆ ಕಿನ್ನಿಗೋಳಿ ವ್ಯವಸಾಯ ಮತ್ತು ಬಜಪೆ, ಸುರತ್ಕಲ್, ಪಕ್ಷಿಕೆರೆ ಹೋಲಿಕೆ ಮಾಡಿದಾಗ ಸುರತ್ಕಲ್ ಬ್ಯಾಂಕಿನ ಪ್ರಗತಿವನ್ನು ಬಜಪೆಹೆಚ್ಚಿದೆಂದು ತಿಳಿಯಬಹುದು.

ಬಜಪೆ ಮತ್ತು ಕಿನ್ನಿಗೋಳಿ ಬ್ಯಾಂಕ್ ಕೂಡ ತನ್ನ ಪ್ರಗತಿಯ ಪ್ರಯತ್ನಗಳನ್ನೇ ನಿರಂತರವಾಗಿ ಮುಂದುವರಿಸುತ್ತಿರುವುದು. ಈ ಹಂತದಲ್ಲಿಯೂ ಶಾಖಾ ವಿಸ್ತರಣೆ ತೊಡಗಿಸುವುದು ಮತ್ತು ಸದಸ್ಯರಿಗೆ ಅನುಕೂಲಕರವಾದ ಯೋಜನೆಗಳನ್ನು ಮುಂದುವರಿಸುತ್ತಿರುವುದು ಸಹಕಾರ ಕ್ಷೇತ್ರದ ಆರೋಗ್ಯಕರ ಬೆಳವಣಿಗೆಯ ದ್ಯೋತಕವಾಗಿದೆ.

# ಅಧ್ಯಾಯ-೪

## ಮಂಗಳೂರಿನ ಆಯ್ದ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕುಗಳ ಸದಸ್ಯರ ಕ್ಷೇತ್ರ ಕಾರ್ಯಧಾರಿತ ಮಾಹಿತಿ ವಿಶ್ಲೇಷಣೆ

# ಅಧ್ಯಾಯ – ೪

# ಮಂಗಳೂರಿನ ಆಯ್ದ ಕೃಷಿ ಸಹಕಾರಿ ಬ್ಯಾಂಕುಗಳ ಮತ್ತು ಸದಸ್ಯರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ ವಿಶ್ಲೇಷಣೆ

**ಪೀಠಿಕೆ:**

ಮಂಗಳೂರಿನ ಆಯ್ದ ವ್ಯವಸಾಯ ಸಹಕಾರಿ ಬ್ಯಾಂಕುಗಳ ಕಾರ್ಯಾವಿಧಾನಗಳ ವಿಸ್ಕೃತವಾದ ಅಧ್ಯಯನ ಮಾಡಲು ಮತ್ತು ಈ ಬ್ಯಾಂಕುಗಳು ಕೃಷಿ ಕಾರ್ಯಾಚಟುವಟಿಕೆಗಳಲ್ಲಿ ಬೀರುವ ಪರಿಣಾಮಗಳನ್ನು ವಿಶ್ಲೇಷಿಸುವ ಉದ್ದೇಶವಿಟ್ಟುಕೊಂಡು ಈ ಅಧ್ಯಯನವನ್ನು ನಡೆಸಲಾಗಿದೆ ಮತ್ತು ಈ ಅಧ್ಯಯನದಲ್ಲಿ ಆಯ್ದ ಬ್ಯಾಂಕುಗಳ ಸದಸ್ಯರ/ ಫಲಾನುಭವಿಗಳ ಮಾಹಿತಿಯನ್ನು ಪ್ರಶ್ನಾವಳಿಗಳ ಮೂಲಕ ಕ್ಷೇತ್ರ ಕಾರ್ಯವನ್ನು ಮಾಡಿ ಸಂಗ್ರಹಿಸಿ ಅವುಗಳನ್ನು ತುಲಾನಾತ್ಮಕವಾಗಿ ವಿಶ್ಲೇಷಿಸಲಾಗಿದೆ.



ಕೃಷಿ ಸಹಕಾರಿ ಬ್ಯಾಂಕುಗಳು ಪಾತ್ರ ಮುಖ್ಯವಾದದ್ದು ಮತ್ತು ಬ್ಯಾಂಕುಗಳು ಮಾಡುವ ಪ್ರಾಮಾಣಿಕ ಮತ್ತು ಒಳ್ಳೆಯ ಕೆಲಸದಿಂದಾಗಿ ಅನೇಕ ಸದಸ್ಯರು ಹೆಚ್ಚಿನ ಪ್ರಯೋಜನವನ್ನು ಪಡೆಯಲು ಯಶಸ್ವಿಯಾಗಿದೆ. ಜನರ ಏಳಿಗೆಗಾಗಿ ಸಹಕಾರಿ ಬ್ಯಾಂಕುಗಳು ಅನೇಕ ಸೌಲಭ್ಯಗಳನ್ನು, ನೀಡುವಲ್ಲಿ ಯಶಸ್ವಿಯಾಗಿ ರೈತರ, ಸದಸ್ಯರ ಸಾರ್ವಜನಿಕರ ಆರ್ಥಿಕ ಮತ್ತು ಸಾಮಾಜಿಕ ಏಳಿಗೆಗಾಗಿ ಹಲವಾರು ಸೌಲಭ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಸಹಕಾರಿ ಸಂಘಗಳು ಮತ್ತು ಬ್ಯಾಂಕುಗಳು ಕಾರ್ಯನಿರ್ವಹಿಸುತ್ತದೆ. ಈ ಸಹಕಾರಿ ಸಂಘಗಳ ಬೆಳವಣಿಗೆಗೆ ಸದಸ್ಯರ ಸಕ್ರಿಯ ಪಾಲ್ಗೊಳ್ಳುವಿಕೆ ಅವಶ್ಯವಾಗಿದೆ.

ಅಧ್ಯಯನಕ್ಕೆ ಆಯ್ದುಕೊಳ್ಳಲಾದ ಕೃಷಿ ಸಹಕಾರಿ ಬ್ಯಾಂಕುಗಳ ಸಂಖ್ಯೆ ಕೇವಲ ನಾಲ್ಕು ಮತ್ತು ಸಂಘಗಳು ೫ ಮಾತ್ರವಾದರು, ಅವುಗಳು ಅಧ್ಯಯನದ ದೃಷ್ಠಿಬಂದ ಪ್ರತಿನಿಧಿಕ ಬ್ಯಾಂಕುಗಳೆಂದು ಪರಿಗಣಿಸಬಹುದು. ಸದಸ್ಯರ ಸಂಖ್ಯೆ, ಕಾರ್ಯಕ್ಷೇತ್ರ ಮತ್ತು ಚಟುವಟಿಕೆಗಳನ್ನು ಗಮನಿಸಿದಾಗ ಆಯ್ದ ಈ ಬ್ಯಾಂಕುಗಳಲ್ಲಿ ಸಾಕಷ್ಟು ಅಧ್ಯಯನಕ್ಕೆ ಯೋಗ್ಯವಾದ ವಿಷಯಗಳಿರುವುದು ಸ್ಪಷ್ಟವಾಗುತ್ತದೆ. ಕ್ಷೇತ್ರಕಾರ್ಯದಲ್ಲಿ ಒಟು ೫೦ ರಷ್ಟು ಬ್ಯಾಂಕಿನ ಸದಸ್ಯರನ್ನು / ಫಲಾನುಭವಿಗಳನ್ನು ಆಯ್ಕೆ ಮಾಡಿ ಪ್ರಶ್ನಾವಳಿಗಳ ಮೂಲಕ ಅವರ ಸಂದರ್ಶನವನ್ನು ನಡೆಸಿ ಮಾಹಿತಿ ಸಂಗ್ರಹಿಸಲಾಗಿದೆ. ಹೀಗೆಯೇ ನಾಲ್ಕು ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ಭೇಟಿಮಾಡಿ ಸಂದರ್ಶನದ ಮೂಲಕ ಅಧ್ಯಯನಕ್ಕೆ ಸಂಬಂದಪಟ್ಟ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**೪.೧ ಸದಸ್ಯರ / ಫಲಾನುಭವಿಗಳ ಪ್ರಾಥಮಿಕ ಮಾಹಿತಿಗಳು:**

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಆಯ್ದ ಸದಸ್ಯರ/ ಫಲಾನುಭವಿಗಳ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸುವಾಗ ಅವರ ಕೌಟುಂಬಿಕ, ಪರಿಚಯ ಮಾಡಿಕೊಳ್ಳಲಾಗಿದೆ. ಹಾಗೇಯೇ ಪ್ರಶ್ನಾವಳಿಯ ಆರಂಭದಲ್ಲಿ ಮಾಹಿತಿದಾರರ ಹೆಸರು ವಿಳಾಸ; ವಿದ್ಯಾರ್ಹತೆ ಮತ್ತು ಕೃಷಿ ಭೂಮಿಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸ್ವರ್ಧೆ ಮೂಲಕ ಸಂಗ್ರಹಿಸಲಾಗಿದೆ ಮತ್ತು ಸದಸ್ಯರು ಯಾವುದಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ ಎಂಬುವುದನ್ನು ಸ್ವರ್ಧೆಮೂಲಕ ಸ್ವಷ್ಟವಾಗಿ ತಿಳಿಯಬಹುದು. ಹೆಚ್ಚಿನ ಸದಸ್ಯರು ಸಾಲವನ್ನು ಪಡೆಯುದಕ್ಕೋಸ್ಕರ ಕೃಷಿ ಬ್ಯಾಂಕಿನ ಸದಸ್ಯರಾಗಲು ಇಷ್ಟಪಡುತ್ತಾರೆ ಎಂದು ಸ್ವರ್ಧೆಯ ಮೂಲಕ ತಿಳಿಯಬಹುದು. ಹೆಚ್ಚಿನ ಸದಸ್ಯರು ಸಾಲವನ್ನು ಪಡೆಯುದಕ್ಕೋಸ್ಕರ ಕೃಷಿ ಬ್ಯಾಂಕಿನ ಸದಸ್ಯರಾಗಲು ಇಷ್ಟಪಡುತ್ತಾರೆ ಎಂದು ಸ್ವರ್ಧೆಯ ಮೂಲಕ ತಿಳಿಯಬಹುದು ಮತ್ತು ಫಲಾನುಭವಿಗಳು ವೈಯಕ್ತಿಕವಾಗಿ ಅವರು ಮಹತ್ವ ನೀಡುವ ವಿಷಯ ಯಾವುದೆಂದು ಕ್ಷೇತ್ರಕಾರ್ಯದ ಮೂಲಕ ತಿಳಿಯಬಹುದಾಗಿದೆ. ಆದುದರಿಂದ ಕ್ಷೇತ್ರಕಾರ್ಯ ಸಂದರ್ಭದಲ್ಲಿ ೫೦ ಫಲಾನುಭವಿಗಳನ್ನು ಸಂದರ್ಶಿಸಲಾಗಿದೆ ಮತ್ತು ಕೃಷಿ ಸಹಕಾರಿ ಬ್ಯಾಂಕಿನಲ್ಲಿ ಅವರ ಪಾತ್ರ ಸಾಲದ ಪ್ರಕಾರಗಳು, ಬ್ಯಾಂಕಿಗೆ ಒಂದು ತಿಂಗಳಿನಲ್ಲಿ ಎಷ್ಟು ಸಾಲ ಭೇಟಿ ಮಾಡುತ್ತಾರೆ, ಠೇವಣಿಯ ಸ್ವರೂಪ ಮತ್ತು ಅವರು ಬ್ಯಾಂಕಿನಿಂದ ಪಡೆದುಕೊಂಡ ಪ್ರಯೋಜನಗಳು ಮತ್ತು ಸೌಲಭ್ಯಗಳು ಮತ್ತು ಸೌಲಭ್ಯಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ.

**೪.೨ ಸದಸ್ಯರ ಪೂರಕ ಮಾಹಿತಿಗಳು**

ಸದಸ್ಯರ ಪೂರಕ ಮಾಹಿತಿಯನ್ನು ಆ ಕ್ಷೇತ್ರದ ಬ್ಯಾಂಕಿನ ಲೆಕ್ಕ ಪತ್ರದ ಮೂಲಕ ಮಾಹಿತಿಯನ್ನು ಪಡೆಯಲಾಗುವುದು. ಸದಸ್ಯರು ಎಷ್ಟು ಸಲ ಸಾಲ ಪಡೆದಿಕೊಂಡಿರುತ್ತಾರೆ, ಎಷ್ಟು ಮರುಪಾವತಿ ಮಾಡಿದ್ದಾರೆ ಎಂದು ತಿಳಿಯಬಹುದಾಗಿದೆ.

೪.೩ ಕೃಷಿ ಸಹಕಾರಿ ಬ್ಯಾಂಕಿನ ಚಟುವಟಿಕೆಗಳು

೧. ಕೃಷಿ ಸಾಲ ಮತ್ತು ಇತರ ಉದ್ದೇಶಗಳಿಗೆ ಸಾಲವನ್ನು ಸದಸ್ಯರಿಗೆ ನೀಡುವುದು.

೨. ಬ್ಯಾಂಕಿನ ಕಾರ್ಯಕ್ಷೇತ್ರದೊಳಗೆ ಇನ್ನು ಹೆಚ್ಚು ಸ್ವಸಹಾಯ ಗುಂಪುಗಳ ರಚನೆಗೆ ಪ್ರೋತ್ಸಾಹ ನೀಡುವುದು.

೩. ಕೃಷಿಗೆ ಬೇಕಾದ ಕೃಷಿ ಸಲಕರಣೆಗಳು ರಸಾಯನಿಕ ಗೊಬ್ಬರ, ಕೀಟನಾಶಕಗಳನ್ನು ಮಿತದರದಲ್ಲಿ ಒದಗಿಸಲಾಗುವುದು.

೪. ಬ್ಯಾಂಕಿನ ಕಾರ್ಯಕ್ಷೇತ್ರದೊಳಗೆ ಸೂಕ್ತ ಕಂಡಲ್ಲಿ ಶಾಖೆಯನ್ನು ತೆರೆಯುವುದು

೫. ಸಂಘದ ಅರ್ಹ ಸದಸ್ಯರಿಗೂ ವೈದ್ಯಕೀಯ ಚಿಕಿತ್ಸೆಗಳಿಗೆ ಆರ್ಥಿಕ ನೆರವು ನೀಡುವುದಲ್ಲದೆ ಯಶಸ್ವಿನಿ ಯೋಜನೆಯನ್ವಯ ಶಸ್ತ್ರಚಿಕಿತ್ಸೆ ವೆಚ್ಚವನ್ನು ಸರಕಾರದಿಂದ ದೊರಕಿಸಿಕೊಡುವಲ್ಲಿ ಶ್ರಮ ವಹಿಸಲಾಗುವುದು.

೬. ಆರ್ಥಿಕವಾಗಿ ಹಿಂದುಳಿದ ಸದಸ್ಯರ ಮಕ್ಕಳಿಗೆ ವಿದ್ಯಾರ್ಥಿವೇತನ ನೀಡುವ ಕಾರ್ಯಕ್ರಮ ಹಮ್ಮಿಕೊಳ್ಳುವುದು.

೭. ರೈತರಿಗೆ ಕೃಷಿ ಚಟುವಟಿಕೆಗಳ ಬಗ್ಗೆ ತರಬೇತಿ, ಹೈನುಗಾರಿಕೆ ತರಬೇತಿ ನೀಡುವುದು.

೮. ಉಚಿತ ಆರೋಗ್ಯ ತಪಾಸಣೆ ಶಿಬಿರ ಏರ್ಪಾಡಿಸುವುದು.

೯. ರೈತರಿಗೆ ರಸಗೊಬ್ಬರದ ಬಗ್ಗೆ ಸರಿಯಾಗಿ ಮಾಹಿತಿಯನ್ನು ನೀಡುವುದು.

೧೦. ಸರಕಾರಿ ಆದೇಶದಂತೆ ಕೃಷಿಕರಿಗೆ ಬೆಳೆ ಸಾಲ ಮತ್ತು ಮಧ್ಯಮಾವಧಿ ಸಾಲ ನೀಡಲಾಗುವುದು.

೧೧. ಕಾರ್ಯ ಕ್ಷೇತ್ರದ ಶಾಲೆಗಳಲ್ಲಿರುವ ಬಡವಿದ್ಯಾರ್ಥಿಗಳಿಗೆ ಉಚಿತ ಪುಸ್ತಕ ವಿತರಣೆ

೧೨. ಬ್ಯಾಂಕಿಗೆ ವ್ಯವಹಾರ ಮಾಡುವುದಲ್ಲದೆ ಸರಕಾರದ ಯಶಸ್ವಿನಿ ವಿಮಾಯೋಜನೆಯನ್ನು ಜಾರಿಗೆ ಗೊಳಿಸಿ ಇಚ್ಛಿಸಿದ ಸದಸ್ಯರನ್ನು ಈ ಯೋಜನೆಯಡಿಯಲ್ಲಿ ನೋಂದಾವಣೆ ಮಾಡಲಾಗುವುದು.

### ೪.೪.೧ ಸದಸ್ಯರ ವಯಸ್ಸಿನ ವಿವರ:

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಫಲಾನುಭವಿಗಳನ್ನು ಸಂದರ್ಶಿಸಿದಾಗ ಅವರ ವಯೋಮಿತಿ ಬೇರೆ, ಬೇರೆಎಂಬುದನ್ನು ಗಮನಿಸಬಹುದು.

| ಕ್ರಮ.ಸಂಖ್ಯೆ | ವಯಸ್ಸು | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ೧೮–೨೭ | – | – |
| ೨ | ೨೮–೨೭ | ೧೧ | ೨೨.೦೦ |
| ೩ | ೩೮–೪೭ | ೦೮ | ೧೬.೦೦ |
| ೪ | ೪೮–೫೭ | ೨೮ | ೫೬.೦೦ |
| ೫ | ೨೭ ಕ್ಕಿಂತ ಮೇಲೆ | ೦೩ | ೦೬.೦೦ |
|  | ಒಟ್ಟು | ೫೦ | ೧೦೦.೦೦ |



ಈ ಮೇಲಿನ ದತ್ತಾಂಶದ ಅಧಾರ ಮೇಲೆ ಮೂಲ ಸಂಶೋಧನಾ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ ಶೇಕಡಾ ೨೨ ರಷ್ಟು ಫಲಾನುಭವಿಗಳು ೨೮-೨೩ರ ವಯಸ್ಸಿನವರು ಆಗಿರುತ್ತಾರೆ. ಹಾಗೆಯೇ ಶೇಕಡಾ ೧೬ ರಷ್ಟು ೩೮-೪೭ರ ವಯಸ್ಸಿನವರು, ಶೇಕಡಾ ೫೬ ರಷ್ಟು ೪೮-೫೭ರ ವಯಸ್ಸಿನವರು. ಶೇಕಡಾ ೬ ರಷ್ಟು ೫೭ಕ್ಕಿಂತ ಮೇಲಿನ ವಯಸ್ಸಿನವರು ಆಗಿರುತ್ತಾರೆ ಎಂದು ತಿಳಿದು ಬಂದಿದೆ.

**೪.೪.೨ ಸದಸ್ಯತನದ ವರ್ಷವಾರು ವಿವರ:-**

ಕೃಷಿ ಸಹಕಾರಿ ಬ್ಯಾಂಕಿನಲ್ಲಿ ಸದಸ್ಯರ ಪಾತ್ರ ಮುಖ್ಯವಾದದ್ದು, ಸಹಕಾರ ಎಂದರೆ ಒಬ್ಬರಿಗೊಬ್ಬರು ಕೈ ಸೇರಿಸಿ ನಡೆಸುವುದು. ಸಹಕಾರಿ ಸಂಘಗಳು ಮುಕ್ತವಾಗಿ ಕಾರ್ಯನಿರ್ವಹಿಸಬೇಕಾದರೆ ಸದಸ್ಯರು ಬೇಕೇ ಬೇಕು. ಬ್ಯಾಂಕಿನ ಸದಸ್ಯನಗಲು ಯಾವುದೇ ತರದಒತ್ತಾಯ ಇರುವುದಿಲ್ಲ ಅವನ ಸ್ವಂತ ಇಚ್ಛೆಯಿಂದ ಬ್ಯಾಂಕಿನ ಸದಸ್ಯತ್ವವನ್ನು ಪಡೆಬೇಕು. ಸದಸ್ಯತ್ವವನ್ನು ಪಡೆಯುವುದು ಮತ್ತುತ್ಯಜಿಸುವುದು ಸ್ವಯಂ ಪೇರಿತವಾಗುತ್ತದೆ.

**ಸದಸ್ಯತನದ ವರ್ಷವಾರು ವಿವರ:**

| ಕ್ರಮ.ಸಂಖ್ಯೆ | ಸದಸ್ಯತನದ ವರ್ಷವಾರು ವಿವರ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ೨೦೧೦ ಮೊದಲು | ೪೫ | ೯೦.೦೦ |
| ೨ | ೨೦೧೧-೨೦೧೨ | ೦೩ | ೦೬.೦೦ |
| ೩ | ೨೦೧೨ ನಂತರ | ೦೨ | ೦೪.೦೦ |
| | ಒಟ್ಟು | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ




ಅಧ್ಯಾಯಿನದಲ್ಲಿ ಕಂಡು ಬರುವಂತೆ ಶೇಕಡಾ ೯೦.೦೦ ರಷ್ಟು (೪೫) ಫಲಾನುಭವಿಗಳು ೨೦೧೦ ರ ಮೊದಲು ಸದಸ್ಯತ್ವವನ್ನು ಪಡೆದಿದ್ದಾರೆ. ಶೇಕಡಾ ೬ ರಷ್ಟು ಫಲಾನುಭವಿಗಳು ೨೦೧೧ ಮತ್ತು ೨೦೧೨ ರಲ್ಲಿ ತಮ್ಮ ಸದಸ್ಯತ್ವವನ್ನು ಪಡೆದಿದ್ದಾರೆ ಎಂದು ಈ ಮೇಲಿನ ಕೋಷ್ಟಕದಿಂದ ತಿಳಿಯಬಹುದಾಗಿದೆ.

**೪.೪.೩ ಕೃಷಿ ಸಹಕಾರಿ ಬ್ಯಾಂಕಿನ ಸದಸ್ಯರಅನುಭವದ ವಿವರ:**

ಸದಸ್ಯರ ಸಕ್ರಿಯ ಪಾಲ್ಗೊಳ್ಳುವಿಕೆ ಸಂಘಗಳ ಬೆಳವಣಿಗೆಗೆ ಅವಶ್ಯಕವಾಗಿರುತ್ತದೆ. ಕೇವಲ ಆರ್ಥಿಕ ಸಹಕಾರಕ್ಕೆ ಮಾತ್ರ ಸೀಮಿತವಾಗಿರದೆ.ವ್ಯಕ್ತಿಯ ಜೀವನ ವಿಕಾಸಕ್ಕೆ ಅವಕಾಶ ಮಾಡಿಕೊಡುತ್ತದೆ.

| ಕ್ರಮ.ಸಂಖ್ಯೆ | ಸದಸ್ಯರ ಅನುಭವದ ವಿವರ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಸಾಮಾನ್ಯ ಸದಸ್ಯನಾಗಿ | ೪೫ | ೯೦.೦೦ |
| ೨ | ನಿರ್ದೇಶಕನಾಗಿ | ೦೩ | ೦೬.೦೦ |
| ೩ | ಅಧ್ಯಕ್ಷನಾಗಿ | ೦೨ | ೦೪.೦೦ |
|  | ಒಟ್ಟು | ೫೦.೦೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ದತ್ತಾಂಶದ ಪ್ರಕಾರ ಶೇಕಡಾ ೯೦ ರಷ್ಟು ಫಲಾನುಭವಿಗಳು ಬ್ಯಾಂಕಿನ ಪ್ರಾಥಮಿಕ ಸದಸ್ಯತ್ವವನ್ನು ಪಡೆದುಕೊಂಡಿದ್ದಾರೆ ಎಂದು ತಿಳಿದುಬಂದಿದೆ. ಶೇಕಡಾ ೬ ರಷ್ಟು ನಿರ್ದೇಶಕನಾಗಿ ಮತ್ತು ಶೇಕಡಾ ೪ ರಷ್ಟು ಅಧ್ಯಕ್ಷನಾಗಿ ಫಲಾನುಭವಿಗಳು ಬ್ಯಾಂಕಿನ ಅನುಭವವನ್ನು ಪಡೆದುಕೊಂಡಿದ್ದಾರೆ ಎಂಬುದನ್ನು ಈ ಮೇಲಿನ ಕೋಷ್ಟಕ ಸ್ಪಷ್ಟ ಪಡಿಸುತ್ತದೆ.

೪.೪.೪ ಫಲಾನುಭವಿಗಳು ಕೃಷಿ ಸಹಕಾರಿ ಬ್ಯಾಂಕಿನಿಂಡ ಪಡೆದುಕೊಂಡ ಸಾಲದ ಪ್ರಕಾರ ಕೃಷಿ ಸಹಕಾರಿ ಬ್ಯಾಂಕುಗಳು ಸದಸ್ಯರಿಗೆ, ೩ ವಿಧಗಳಲ್ಲಿ ಸಾಲದ ಸೌಲಭ್ಯವನ್ನು ಒದಗಿಸಿ ಕೊಟ್ಟಿದ್ದಾರೆ ಉದಹಾರಣೆಗೆ, ಅಲ್ಪಾವಧಿ ಸಾಲ, ಮಧ್ಯಮಾವಧಿ ಸಾಲ, ದೀರ್ಘವಾಧಿ ಸಾಲ.

| ಕ್ರಮ.ಸಂಖ್ಯೆ | ಸಾಲದ ಪ್ರಕಾರ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಅಲ್ಪಾವಧಿ | ೨೪.೦೦ | ೪೮.೦೦ |
| ೨ | ಮಧ್ಯಮಾವಧಿ | ೧೪.೦೦ | ೨೮.೦೦ |
| ೩ | ದೀರ್ಘಾವಧಿ | ೧೨.೦೦ | ೨೪.೦೦ |
| | ಒಟ್ಟು | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಕ್ಷೇತ್ರ ಕಾರ್ಯದ ಸಂಧರ್ಭದಲ್ಲಿ ಫಲಾನುಭವಿಗಳನ್ನು ಸಂದರ್ಶಿಸಿದಾಗ ಶೇಕಡಾ ೪೮ರಷ್ಟು ಜನರು ಅಲ್ಪಾವಧಿ ಸಾಲದ ಸೌಲಭ್ಯವನ್ನು ಪಡೆದಿರುತ್ತಾರೆ ಎಂದು ಸ್ಪಷ್ಟಪಡಿಸುತ್ತದೆ. ಶೇಕಡಾ ೨೮ ರಷ್ಟು ಮತ್ತು ೨೪ರಷ್ಟು ಸದಸ್ಯರು ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲವನ್ನು ಪಡೆದಿರುತ್ತಾರೆ.

**೪.೪.೫ ಸದಸ್ಯರಾಗಿರುವ ಕ್ರ.ಸಂ. ಬ್ಯಾಂಕಿನಲ್ಲಿ ಸಕಾಲಕ್ಕೆ ಆಗುವ ಚುನಾವಣೆಗಳ ವಿವರ**

| ಕ್ರಮ.ಸಂಖ್ಯೆ | ಉತ್ತರ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಅಗುತ್ತಿದೆ | ೪೭ | ೯೪.೦೦ |
| ೨ | ಇಲ್ಲ | ೦೧ | ೦೨.೦೦ |
| ೩ | ಗೊತ್ತಿಲ್ಲ | ೦೨ | ೦೪.೦೦ |
| | ಒಟ್ಟು | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ದತ್ತಾಂಶ ಪ್ರಕಾರ ಶೇಕಡಾ ೯೪.೦೦ ರಷ್ಟು ಕೃಷಿ ಸಹಕಾರಿ ಬ್ಯಾಂಕಿನಲ್ಲಿ ಸಕಾಲಕ್ಕೆ ಚುನಾವಣೆಗಳು ನಡೆಯುತ್ತಿವೆ. ಶೇಕಡಾ ೨ ರಷ್ಟು ಬ್ಯಾಂಕಿನಲ್ಲಿ ಚುನವಾಣೆಗಳು ಅಗುತ್ತಿಲ್ಲ ಎಂಬುದು ಫಲಾನುಭವಿಗಳ ಅಭಿಪ್ರಾಯವಾಗಿದೆ.

**೪.೪.೬. ಕೃಷಿ ಸಹಕಾರಿ ಬ್ಯಾಂಕಿನಿಂದ ೪ ಸಂಘಗಳಿಂದ ಫಲಾನುಭವಿಗಳು ಪಡೆದುಕೊಂಡ ಪ್ರಯೋಜನಗಳ ವಿವರ:**

ಕೃಷಿ ಸಹಕಾರಿ ಸಂಘಗಳು ಸದಸ್ಯರಿಗೆ ಕೃಷಿಗೆ ಬೇಕಾದ ಉಪಕರಣಗಳು, ಬಿತ್ತನೆ ಬೀಜಗಳು, ರಸಗೊಬ್ಬರ, ಕೀಟ ನಾಶಕಗಳ ಸೌಲಭ್ಯವನ್ನು ದೊರಕಿಸಿಕೊಡುತ್ತದೆ. ಹಾಗೆಯೇ ಕೃಷಿಗೆ ಬೇಕಾದ ಸಾಲ ಸೌಲಭ್ಯ ಇದರಿಂದ ಕೃಷಿಕ್ಷೇತ್ರದಲ್ಲಿ ಬೆಳವಣಿಗೆ ಹಾಗೂ ಜನರಆರ್ಥಿಕಪರಿಸ್ಥಿತಿ ಉತ್ತಮವಾಗುತ್ತದೆ. ಹೆಚ್ಚಿನ ಸದಸ್ಯರು ಕೃಷಿಯನ್ನೇ ತನ್ನ ಕಸುಬಾಗಿದ್ದು ಮತ್ತು ಜೀವನೋಪಾಯ ಮಾರ್ಗವಾಗಿದೆ.

**೪.೪.೭ ಕೃಷಿ ಸಹಕಾರಿ ಬ್ಯಾಂಕಿನ ಸದಸ್ಯರಾಗಿರುವ ಪ್ರಧಾನ ಉದ್ದೇಶ:**

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ೫೦ ಕ್ಷೇತ್ರವನ್ನು ಸಂದರ್ಶಿಸಿದಾಗ, ತಿಳಿದುಕೊಂಡ ವಿಷಯವೇನೆಂದರೆ ಬೇರೆ ಬೇರೆ ಉದ್ದೇಶವಿಟ್ಟುಕೊಂಡು ಸದಸ್ಯರು ಕೃಷಿ ಸಹಕಾರಿ ಬ್ಯಾಂಕಿನ ಸದಸ್ಯತ್ವವನ್ನು ಪಡೆದಿರುತ್ತಾರೆ. ಕೃಷಿ ಸಹಕಾರಿ ಬ್ಯಾಂಕುಗಳು ಕೇವಲ ಸಾಲವನ್ನು ಕೊಡುವುದಲ್ಲದೆ, ಸಾಮಾಜಿಕ, ಆರ್ಥಿಕ ಚಟುವಟಿಕೆಗಳಿಗೆ ಹೆಚ್ಚು ಮಹತ್ವ ನೀಡುತ್ತದೆ. ಜನರ ಹಿತಾಸಕ್ತಿ ಮತ್ತು ಜೀವನೋಪಾಯಕ್ಕೆ ಕೃಷಿ ಸಹಕಾರಿ ಸಂಘಗಳ ಪಾತ್ರ ಮುಖ್ಯವಾಗಿದೆ. ಸದಸ್ಯರ ಸೇವೆಯೇ ಸಹಕಾರದ ಮುಖ್ಯ ಗುರಿಯಾಗಿದೆ.

| ಕ್ರಮ ಸಂಖ್ಯೆ | ಪ್ರಧಾನ ಉದ್ದೇಶ | ಪ್ರತಿಕ್ರಿಯೆ | ಶೇಕಡವಾರು ವಿವರ (%) |
|---|---|---|---|
| ೧. | ಸಾಲವನ್ನು ಪಡೆಯುವುದಕ್ಕೋಸ್ಕರ | ೨೮ | ೫೬.೦೦ |
| ೨. | ಸಮಾಜಸೇವೆ | ೧೧ | ೨೨.೦೦ |
| ೩. | ಮತಚಲಾಯಿಸುವುದರ | ೦೩ | ೦೬.೦೦ |
| ೪. | ದೃಷ್ಟಿಯಿಂದ ಠೇವಣಿ | ೦೮ | ೧೬.೦೦ |
| | ಒಟ್ಟು | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ಕೋಷ್ಟಕದಲ್ಲಿ ಕಂಡುಬರುವ ವಿಷಯವೇನೆಂದರೆ, ಶೇಕಡಾ ೫೬ ರಷ್ಟು ಸದಸ್ಯರ ಪ್ರಧಾನ ಉದ್ದೇಶ ಸಾಲ ಪಡೆಯುವುದಾಗಿದೆ, ಕೇವಲ ಶೇಕಡಾ ೨೨ ರಷ್ಟು ಫಲಾನುಭವಿಗಳ ಪ್ರಮುಖ ಉದ್ದೇಶ ಸಾಮಾಜಿಕ ಸೇವೆ. ಅಂದರೆ ಜನರ ಹಿತಾಸಕ್ತಿಯನ್ನು ಬಯಸುವುದು. ಜನರ ಏಳಿಗೆಗಾಗಿ ಶ್ರಮಿಸುವುದು ಮುಂತಾದವು. ಸದಸ್ಯರು ಹಣವನ್ನು ಜಮ ಮಾಡುವುದರಕ್ಕೋಸ್ಕರ ಸಹಕಾರಿ ಬ್ಯಾಂಕಿನ ಸದಸ್ಯತ್ವನ್ನು ಪಡೆದುಕೊಂಡಿಲ್ಲ ಎಂದು ಸ್ಪಷ್ಟಪಡಿಸುತ್ತದೆ.

**೪.೪.೮ ಠೇವಣಿ ಸ್ವರೂಪ/ಪ್ರಕಾರದ ವಿವರ:**

ಕೃಷಿ ಸಹಕಾರಿ ಬ್ಯಾಂಕಿನಲ್ಲಿ ೪ ರೀತಿಯ ಠೇವಣಿ ಸಂಚಯನದ ಸೌಲಭ್ಯವಿದೆ. ಉಳಿತಾಯ ಖಾತೆ, ಚಾಲ್ತಿ ಖಾತೆ, ನಿರಖು ಠೇವಣಿ, ಮಾಸಿಕ ಠೇವಣಿ ಎಂದು ವಿಂಗಡಿಸಬಹುದು. ಸಂಘದ ಸದಸ್ಯರಲ್ಲಿ ಉಳಿತಾಯದ ಮನೋಭಾವನೆ, ಮಿತವ್ಯಯ ಸಹಕಾರಿ ಮನೋಭಾವನೆಯನ್ನುಂಟು ಮಾಡುವುದೇ ಸಹಕಾರಿ ಸಂಘದ ಸಮಾನ ಉದ್ದೇಶ. ಆದುದರಿಂದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಫಲಾನುಭವಿಗಳನ್ನು ಸಂದರ್ಶಿಸಿದಾಗ ತಾವು ಉಳಿತಾಯ ಮಾಡಿದ ಹಣವನ್ನು ತಮಗೆ ಇಷ್ಟ ಬಂದ ಠೇವಣಿಯಲ್ಲಿ ಇಡಲು ಬಯಸುತ್ತಾರೆ ಎಂದು ತಿಳಿಯಬಹುದಾಗಿದೆ.

| ಕ್ರಮ ಸಂಖ್ಯೆ | ಠೇವಣಿಯ ಪ್ರಕಾರ | ಸಂಖ್ಯೆ | ಶೇಕಡವಾರು ವಿವರ (%) |
|---|---|---|---|
| ೧. | ಉಳಿತಾಯ ಖಾತೆ | ೪೦.೦೦ | ೮೦.೦೦ |
| ೨. | ಚಾಲ್ತಿ ಖಾತೆ | ೦೮.೦೦ | ೧೬.೦೦ |
| ೩. | ನಿರಖು ಠೇವಣಿ | ೦೨.೦೦ | ೦೪.೦೦ |
| ೪. | ಮಾಸಿಕ ಠೇವಣಿ | – | – |
| | **ಒಟ್ಟು** | **೫೦.೦೦** | **೧೦೦.೦೦** |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ದತ್ತಾಂಶದ ಆಧಾರದ ಮೇಲೆ ಕಂಡುಬರುವ ವಿಷಯವೇನೆಂದರೆ ಹೆಚ್ಚಾಗಿ ಜನರು ತಮ್ಮ ಹಣವನ್ನು ಉಳಿತಾಯ ಖಾತೆಯಲ್ಲಿ ಇಡಲು ಬಯಸುತ್ತಾರೆ. ಯಾಕೆಂದರೆ ಹೆಚ್ಚಿನ ಸದಸ್ಯರು ರೈತರು. ಆದ್ದರಿಂದ ಅವರಲ್ಲಿ ಅಷ್ಟೊಂದು ಹಣ ಇರುವುದಿಲ್ಲ. ಶೇಕಡ ೮೦ ರಷ್ಟು

ಫಲಾನುಭವಿಗಳು ತಮ್ಮ ಹಣವನ್ನು ಉಳಿತಾಯ ಖಾತೆಯಲ್ಲಿ ಜಮಾ ಮಾಡಿದ್ದಾರೆ ಎಂದು ತಿಳಿದುಬಂದಿದೆ. ಚಾಲ್ತಿ ಮತ್ತು ನಿರಖು ಠೇವಣಿಯಲ್ಲಿ ಶೇಕಡ ೧೬ ಮತ್ತು ೪ ರಷ್ಟು ಹಣವನ್ನು ಜನರು ಜಮಾ ಮಾಡಿದ್ದಾರೆ ಎಂದು ಕಂಡುಬಂದಿದೆ.

**೪.೪.೯ ಕೃಷಿ ಸಹಕಾರಿ ಸಂಘಗಳಾದ ಫಲಾನುಭವಿಗಳು ಪಡೆಯುವ ಪ್ರಯೋಜನಗಳ ವಿವರ:**

| ಕ್ರಮ ಸಂಖ್ಯೆ | ಪ್ರಯೋಜನಗಳು | ಸಂಖ್ಯೆ | ಶೇಕಡವಾರು ವಿವರ (%) |
|---|---|---|---|
| ೧. | ಆಹಾರ ಧಾನ್ಯಗಳು | ೧೫ | ೩೦.೦೦ |
| ೨. | ಸೀಮೆಎಣ್ಣೆ/ಸೌಲಭ್ಯ | ೨೧ | ೪೨.೦೦ |
| ೩. | ಗೊಬ್ಬರ/ಕ್ರಿಮಿನಾಶಕಗಳು | ೧೪ | ೨೮.೦೦ |
| ೪. | ಕೃಷಿ ಸಲಕರಣೆಗಳ ಖರೀದಿ | – | – |
| | **ಒಟ್ಟು** | **೫೦** | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ಕೋಷ್ಟಕದಲ್ಲಿ ಕಂಡುಬರುವ ವಿಷಯವೇನೆಂದರೆ ಹೆಚ್ಚಿನ ಸದಸ್ಯರು ಬ್ಯಾಂಕಿನಿಂದ ಎಲ್ಲಾ ಪ್ರಯೋಜನಗಳನ್ನು ಪಡೆದುಕೊಂಡಿದ್ದಾರೆ ಎಂದು ಸ್ಪಷ್ಟಪಡಿಸುತ್ತದೆ. ಈ ಮೇಲಿನ ದತ್ತಾಂಶದ ಪ್ರಕಾರ ಸೀಮೆಎಣ್ಣೆ ಸೌಲಭ್ಯಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ ಶೇಕಡಾ ೪೨ ರಷ್ಟು

**೪.೪.೧೦ ಕೃಷಿ ಸಹಕಾರಿ ಸಂಘಗಳಿಂದ ಕೃಷಿಗೆ ಸಂಬಂಧಪಟ್ಟ ವೈಜ್ಞಾನಿಕ ಉಪಕರಣದ ಬಗ್ಗೆ ಮಾಹಿತಿಯ ವಿವರ:**

ಹೆಚ್ಚಿನ ಕೃಷಿಕರು ವೈಜ್ಞಾನಿಕ ಉಪಕರಣವನ್ನು ಕೃಷಿಗೆ ಅಳವಡಿಸಿದ್ದಾರೆ. ಉದಾಹರಣೆಗೆ ಟ್ರಾಕ್ಟರ್, ಟಿಲ್ಲರ್, ಹೈಬ್ರಿಡ್ ಬೀಜಗಳ ಬಳಕೆ ಇದರಿಂದ ಉತ್ಪಾದನೆ ಜಾಸ್ತಿಯಾಗುತ್ತದೆ. ಪ್ರಾಚೀನ ಕಾಲದಲ್ಲಿ ಕೃಷಿಕರು ಕೇವಲ ಹಳೆಯ ಸಂಪ್ರದಾಯಿಕ ಕೃಷಿ ಉಪಕರಣಗಳನ್ನು ಬಳಸುತ್ತಿದ್ದರು. ಈಗ ಕೃಷಿ ಸಹಕಾರಿ ಬ್ಯಾಂಕುಗಳು, ಕೃಷಿಕರಿಗೆ ಸರಿಯಾದ ಸಮಯಕ್ಕೆ ವೈಜ್ಞಾನಿಕ ಉಪಕರಣದ ಬಗ್ಗೆ ಮಾಹಿತಿ ನೀಡುತ್ತಾ, ಕೃಷಿಯಲ್ಲಿ ಅಭಿವೃದ್ಧಿ ಸಾಧಿಸಲು ನೆರವು ನೀಡುತ್ತದೆ.

| ಕ್ರಮ ಸಂಖ್ಯೆ | ವಿವರಗಳು | ಸಂಖ್ಯೆ | ಶೇಕಡವಾರು ವಿವರ (%) |
|---|---|---|---|
| ೧. | ಹೌದು | ೫೦ | ೧೦೦.೦೦ |
| ೨. | ಇಲ್ಲ | – | – |
| | ಒಟ್ಟು | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ದತ್ತಾಂಶದ ಪ್ರಕಾರ ಕೃಷಿ ಸಹಕಾರಿ ಬ್ಯಾಂಕು ಮತ್ತು ಸಂಘಗಳು ಸದಸ್ಯರಿಗೆ ಸರಿಯಾದ ಸಮಯದಲ್ಲಿ ಕೃಷಿಗೆ ಸಂಬಂಧಪಟ್ಟ ವೈಜ್ಞಾನಿಕ ಉಪಕರಣದ ಬಗ್ಗೆ ಸರಿಯಾದ ಮಾಹಿತಿ ದೊರಕಿಸಿಕೊಡುತ್ತಾರೆ ಎಂಬುವುದು ಅವರ ಅಭಿಪ್ರಾಯ. ಶೇಕಡ ೧೦೦ ರಷ್ಟು ಫಲಾನುಭವಿಗಳು ಇದರ ಪ್ರಯೋಜನ ಪಡೆಯುತ್ತಾರೆ ಎಂದು ಈ ಕೋಷ್ಟಕದಲ್ಲಿ ಸ್ಪಷ್ಟಪಡಿಸುತ್ತದೆ.

**೪.೪.೧೧ ಫಲಾನುಭವಿಗಳು ಬ್ಯಾಂಕಿಗೆ ಒಂದು ತಿಂಗಳಿಗೆ ಭೇಟಿ ನೀಡಿದ ವಿವರ:**

| ಕ್ರಮ ಸಂಖ್ಯೆ | ಅವಧಿ | ಪ್ರತಿಕ್ರಿಯೆ | ಶೇಕಡವಾರು ವಿವರ (%) |
|---|---|---|---|
| ೧. | ೨–೪ ಬಾರಿ | ೨೯ | ೫೮.೦೦ |
| ೨. | ೫–೭ ಬಾರಿ | ೧೦ | ೨೦.೦೦ |
| ೩. | ೮–೧೦ ಬಾರಿ | ೦೭ | ೧೪.೦೦ |
| ೪. | ೧೦ ಕ್ಕಿಂತ ಹೆಚ್ಚು ಬಾರಿ | ೦೪ | ೦೮.೦೦ |
| | ಒಟ್ಟು | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ಕೋಷ್ಟಕದಂತೆ ಶೇಕಡ ೫೮ ಮಂದಿ ಫಲಾನುಭವಿಗಳು ಒಂದು ತಿಂಗಳಲ್ಲಿ ೨ ಮತ್ತು ೪ ಬಾರಿ ಬ್ಯಾಂಕಿಗೆ ಭೇಟಿ ನೀಡುತ್ತಾರೆ. ಶೇಕಡಾ ೨೦ ರಷ್ಟು ೫ ಮತ್ತು ೭ ಬಾರಿ, ಶೇಕಡಾ ೧೪ ರಷ್ಟು ೮ ಮತ್ತು ೧೦ ಬಾರಿ ಮತ್ತು ಶೇಕಡ ೮ ರಷ್ಟು ೧೦ ಕ್ಕಿಂತ ಹೆಚ್ಚು ಬಾರಿ ಬ್ಯಾಂಕಿಗೆ ಭೇಟಿ ನೀಡುತ್ತಾರೆ. ಕೆಲವರು ಪಾಸ್‌ಬುಕನ್ನು ಎಂಟರ್ ಮಾಡಲಿಕ್ಕೆ ಅಥವಾ ಹಣವನ್ನು ವಿತ್‌ಡ್ರಾ ಮಾಡಲಿಕ್ಕೆ ಮತ್ತು ಕೆಲವೊಮ್ಮೆ ಸಾಲ ಪಡೆಯುವುದಕ್ಕೋಸ್ಕರ ಜನರು ಆಗಾಗ ಬ್ಯಾಂಕಿಗೆ ಭೇಟಿ ನೀಡುತ್ತಾರೆ.

### ೪.೪.೧೨ ಕೃಷಿ ಸಹಕಾರಿ ಬ್ಯಾಂಕ್ ಮತ್ತು ಸಂಘಗಳ ಅವಶ್ಯಕತೆ ಕುರಿತು

ಕೃಷಿ ಸಹಕಾರಿ ಬ್ಯಾಂಕ್ ಮತ್ತು ಸಂಘಗಳು ಬೇಕೆಬೇಕು ಎಂಬುವುದು ಫಲಾನುಭವಿಗಳ ಅಭಿಪ್ರಾಯ. ಕೃಷಿ ಸಹಕಾರಿ ಬ್ಯಾಂಕ್ ಮತ್ತು ಸಂಘಗಳು ಸದಸ್ಯರಿಗೆ ಹಲವು ರೀತಿಯಲ್ಲಿ ಸಹಾಯ ಮಾಡುತ್ತವೆ. ವಾಣಿಜ್ಯ ಬ್ಯಾಂಕಿಗೆ ಹೋಲಿಸಿದರೆ ಕೃಷಿ ಸಹಕಾರಿ ಬ್ಯಾಂಕ್‌ಗಳು ಕಡಿಮೆ ಬಡ್ಡಿ ದರದಲ್ಲಿ ಸಾಲದ ಸೌಲಭ್ಯವನ್ನು ಒದಗಿಸಿಕೊಡುತ್ತದೆ. ಹಾಗೆಯೇ ಆರ್ಥಿಕವಾಗಿಯೂ ಜನರಿಗೆ ಹಲವು ರೀತಿಯಲ್ಲಿ ಸಹಾಯ ಮಾಡುತ್ತದೆ.

| ಕ್ರಮ ಸಂಖ್ಯೆ | ವಿವರಗಳು | ಪ್ರತಿಕ್ರಿಯೆ | ಶೇಕಡವಾರು ವಿವರ (%) |
|---|---|---|---|
| ೧. | ಹೌದು | ೫೦ | ೧೦೦.೦೦ |
| ೨. | ಇಲ್ಲ | – | – |
| | ಒಟ್ಟು | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ಕೋಷ್ಟಕದಂತೆ ಶೇಕಡ ೧೦೦% ಫಲಾನುಭವಿಗಳು ಕೃಷಿ ಸಹಕಾರಿ ಬ್ಯಾಂಕ್ ಮತ್ತು ಸಂಘಗಳು ಬೇಕೇಬೇಕು ಎಂದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಫಲಾನುಭವಿಗಳನ್ನು ಸಂದರ್ಶಿಸುವ ಅವರು ಹೇಳಿದ ಅಭಿಪ್ರಾಯ. ಯಾಕೆಂದರೆ ಕೃಷಿ ಸಹಕಾರಿ ಬ್ಯಾಂಕ್ ಮತ್ತು ಸಂಘಗಳು ಉತ್ತಮ ಸೇವೆ ಜನರಿಗೆ ನೀಡುತ್ತಾ ಬಂದಿದ್ದಾರೆ. ಜನರ ಕಷ್ಟ ಸುಖಗಳಿಗೆ ಸಹಕಾರಿ ಬ್ಯಾಂಕುಗಳು ಭಾಗಿಯಾಗುತ್ತಾರೆ. ಆರ್ಥಿಕ ನೆರವು ಮತ್ತು ಸಾಲಸೌಲಭ್ಯಗಳನ್ನು ದೊರಕಿಸಿಕೊಡುತ್ತದೆ.

**೪.೪.೧೩ ಬ್ಯಾಂಕ್ ನೀಡುವ ಸಾಲದ ಸೌಲಭ್ಯದ ಕುರಿತು ಮಾಹಿತಿ:**

ಕೃಷಿ ಸಹಕಾರಿ ಬ್ಯಾಂಕ್‌ಗಳು ಜನರಿಗೆ ಸರಿಯಾದ ಸಮಯಕ್ಕೆ ಸಾಲದ ಸೌಲಭ್ಯವನ್ನು ಒದಗಿಸಿ ಕೊಡುತ್ತಾರೆ.

| ಕ್ರಮ ಸಂಖ್ಯೆ | ವಿವರಗಳು | ಪ್ರತಿಕ್ರಿಯೆ | ಶೇಕಡವಾರು ವಿವರ (%) |
|---|---|---|---|
| ೧. | ಹೌದು | ೫೦ | ೧೦೦.೦೦ |
| ೨. | ಇಲ್ಲ | – | – |
| | ಒಟ್ಟು | ೫೦ | ೧೦೦.೦೦ |

ಈ ಮೇಲಿನ ದತ್ತಾಂಶದ ಪ್ರಕಾರ ಶೇಕಡಾ ೧೦೦ ರಷ್ಟು ಕೃಷಿ ಸಹಕಾರಿ ಬ್ಯಾಂಕ್‌ಗಳು ಸದಸ್ಯರಿಗೆ ಸರಿಯಾದ ಸಮಯಕ್ಕೆ ಸಾಲದ ಸೌಲಭ್ಯವನ್ನು ದೊರಕಿಸಿ ಕೊಟ್ಟಿದ್ದಾರೆ ಎಂಬುವುದು ಫಲಾನುಭವಿಗಳ ಅಭಿಪ್ರಾಯ.

**೪.೪.೧೪ ಕೃಷಿ ಸಹಕಾರಿ ಬ್ಯಾಂಕುಗಳ ಮೂಲಕ ರಚನೆಗೊಂಡ ಸಂಘಗಳ ವಿವರ:**

ಕೃಷಿ ಸಹಕಾರಿ ಬ್ಯಾಂಕ್‌ಗಳು ಅನೇಕ ಸಂಘಗಳನ್ನು ಜನರ ಏಳಿಗೆಗಾಗಿ ರಚನೆ ಮಾಡಿವೆ. ಉದಾಹರಣೆ ಸ್ವ ಸಹಾಯ ಯೋಜನೆ, ಯಶಸ್ವಿನಿ ಯೋಜನೆ, ರೈತರ ಕೂಟ ಮುಂತಾದವು. ಸ್ವಸಹಾಯ ಯೋಜನೆಯಿಂದ ಅನೇಕ ಸದಸ್ಯರು ಪ್ರಯೋಜನೆ ಪಡೆದಿದ್ದಾರೆ. ಇದರಿಂದ ಅನೇಕ ಸದಸ್ಯರು ಸ್ವಲ್ಪ ಮಟ್ಟಿಗೆ ತಾವು ದುಡಿದ ಹಣವನ್ನೇ ಉಳಿತಾಯ ಮಾಡಿ ಭವಿಷ್ಯದ ಭದ್ರತೆಗಳಾಗಿ ಜಮ ಮಾಡುತ್ತಾರೆ.

ಯಶಸ್ವಿನಿ ಯೋಜನೆ ಎಂದರೆ ಸರಕಾರದ ಯೋಜನೆ ಅನೇಕ ಸದಸ್ಯರು ಪ್ರಯೋಜನ ಪಡೆದಿದ್ದಾರೆ. ಚಿಕಿತ್ಸಾ ಸಂದರ್ಭದಲ್ಲಿ ಅರ್ಧದಷ್ಟು ಹಣವನ್ನು ರಿಯಾಯಿತಿ ದರದಲ್ಲಿ ಸದಸ್ಯರಿಗೆ ನೀಡಲಾಗುತ್ತಿದೆ. ಉದಾಹರಣೆಗೆ ಹೃದಯಘಾತ, ಅಪಘಾತ ಮುಂತಾದವು.

ರೈತಕೂಟ ಎಂದರೆ ನಿರ್ದಿಷ್ಟ ಗ್ರಾಮದೊಳಗೆ ಸ್ಥಾಪನೆಗೊಂಡ ಸಂಘ ರೈತಕೂಟ ಇದರಿಂದ ಅನೇಕ ರೈತರು ತಮಗೆ ಏನಾದರೂ ತೊಂದರೆ ಬಂದ ಮೀಟಿಂಗ್ ಸಂದರ್ಭದಲ್ಲಿ ಅವರ ತೊಂದರೆಯನ್ನು ಮುಂದೆಯಿಟ್ಟು ಅದಕ್ಕೆ ಸೂಕ್ತ ಪರಿಹಾರವನ್ನು ದೊರಕಿಸಿ ಕೊಡಲಾಗುವುದು ಎಂಬುವುದನ್ನು ಈ ಕೋಷ್ಟಕದಲ್ಲಿ ತಿಳಿಯಬಹುದು.

| ಕ್ರಮ ಸಂಖ್ಯೆ | ಸಂಘಗಳು | ಸಂಖ್ಯೆ | ಶೇಕಡವಾರು ವಿವರ (%) |
|---|---|---|---|
| ೧. | ಸ್ವ-ಸಹಾಯ ಸಂಘ | ೨೫ | ೫೦% |
| ೨. | ಯಶಸ್ವಿನಿ ಯೋಜನೆ | ೧೫ | ೩೦% |
| ೩. | ರೈತರ ಕೂಟ | ೧೦ | ೨೦% |
| | **ಒಟ್ಟು** | ೫೦ | ೧೦೦% |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

**೪.೪.೧೫ ಬ್ಯಾಂಕಿನ ಸೇವೆಯ ವಿವರ:**

ಬ್ಯಾಂಕಿಗೆ ಸೇವೆಯ ಉತ್ತಮವಾಗಿದೆ ಎಂದು ಎಲ್ಲಾ ಫಲಾನುಭವಿಗಳ ಅಭಿಪ್ರಾಯ. ಬ್ಯಾಂಕಿನ ಸೇವೆಯಿಂದ ಎಲ್ಲಾ ಸದಸ್ಯರಿಗೆ ಅನೇಕ ರೀತಿಯ ಸಹಾಯ, ಸೌಲಭ್ಯ ಮತ್ತು ಆರ್ಥಿಕವಾಗಿಯೂ, ಸಾಮಾಜಿಕವಾಗಿಯೂ ಮತ್ತು ಜೀವನ ನಿರ್ವಹಣೆಗೆ ದಾರಿ ಮಾಡಿಕೊಟ್ಟಿದೆ ಎಚಿದು ಈ ಕೆಳಗಿನ ಕೋಷ್ಟಕದಲ್ಲಿ ತಿಳಿಯಬಹುದು.

| ಕ್ರಮ ಸಂಖ್ಯೆ | ವಿವರ | ಪ್ರತಿಕ್ರಿಯೆ | ಶೇಕಡವಾರು ವಿವರ (%) |
|---|---|---|---|
| ೧. | ಅತ್ಯುತ್ತಮ | ೪೪.೦೦ | ೮೮.೦೦ |
| ೨. | ಉತ್ತಮ | ೦೫.೦೦ | ೧೦.೦೦ |
| ೩. | ತೃಪ್ತಿಕರ | ೦೧.೦೦ | ೦೨.೦೦ |
| ೪. | ತೃಪ್ರಿಕರವಲ್ಲ | – | – |
| | **ಒಟ್ಟು** | ೫೦.೦೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

**೪.೪.೧೬ ಬ್ಯಾಂಕಿನ ವರ್ಷಕ್ಕೊಮ್ಮೆ ಆಗುವ ಚುನಾವಣೆಯಲ್ಲಿ ಸದಸ್ಯರ ಪಾತ್ರ:**

| ಕ್ರಮ ಸಂಖ್ಯೆ | ಚುನಾವಣೆಯ ವಿವರ | ಪ್ರತಿಕ್ರಿಯೆ | ಶೇಕಡವಾರು ವಿವರ (%) |
|---|---|---|---|
| ೧. | ಹಿಂದೆ ಸ್ಪರ್ಧಿಸಿದ್ದೆ | ೨೦ | ೪೦.೦೦ |
| ೨. | ಸ್ಪರ್ಧಿಸಲು ಇಚ್ಛೆ ಇದೆ | ೦೧ | ೦೨.೦೦ |
| ೩. | ಸ್ಪರ್ಧಿಸಲು ಇಚ್ಛೆ ಇಲ್ಲ | ೨೯ | ೫೮.೦೦ |
| | **ಒಟ್ಟು** | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಫಲಾನುಭವಿಗಳನ್ನೇ ಸಂದರ್ಶಿಸಿದಾಗ ಶೇಕಡ ೪೦ ಮಂದಿ ಸದಸ್ಯರು ಹಿಂದೆ ಸ್ಪರ್ಧಿಸಿದ್ದಾರೆ. ಶೇಕಡಾ ೨ ರಷ್ಟು ಮಂದಿ ಚುನಾವಣೆಗೆ ಸ್ಪರ್ಧಿಸಲು ಇಚ್ಛೆ ಇದೆ ಎಂದು ಅಭಿಪ್ರಾಯ ಹೇಳಿದ್ದಾರೆ ಮತ್ತು ಶೇಕಡಾ ೫೮ ರಷ್ಟು ಫಲಾನುಭವಿಗಳಿಗೆ ಸ್ಪರ್ಧಿಸಲು ಇಚ್ಛೆ ಇಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ.

**೪.೪.೧೭ ಫಲಾನುಭವಿಗಳು ಯಾವ ಕೃಷಿ ಸಂಘ ಬ್ಯಾಂಕ್‌ನ ಸದಸ್ಯತ್ವವನ್ನು ಹೊಂದಿದ್ದಾರೆ ಎಂಬುವುದರ ಅಭಿಪ್ರಾಯ:**

ಅನೇಕ ಸದಸ್ಯರು ತಮ್ಮ ತಮ್ಮ ಕ್ಷೇತ್ರದಲ್ಲಿರುವ ಬ್ಯಾಂಕಿನಲ್ಲಿ ಸದಸ್ಯತ್ವವನ್ನು ಪಡೆದಿದ್ದಾರೆ. ಉದಾಹರಣೆ ಕಿನ್ನಿಗೋಳಿಯಲ್ಲಿ ವಾಸ ಮಾಡುವ ಫಲಾನುಭವಿಗಳು ಕಿನ್ನಿಗೋಳಿ ವ್ಯವಸಾಯ ಬ್ಯಾಂಕಿನ ಸದಸ್ಯತ್ವವನ್ನು ಪಡೆದಿರುತ್ತಾರೆ.

| ಕ್ರಮ ಸಂಖ್ಯೆ | ಬ್ಯಾಂಕಿನಲ್ಲಿ ಸದಸ್ಯತ್ವವನ್ನು ಪಡೆದ ವಿವರ | ಸಂಖ್ಯೆ | ಶೇಕಡವಾರು ವಿವರ (%) |
|---|---|---|---|
| ೧. | ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ | ೧೨ | ೨೪.೦೦ |
| ೨. | ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ | ೧೪ | ೨೮.೦೦ |
| ೩. | ಪಕ್ಷಿಕೆರೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ | ೧೨ | ೨೪.೦೦ |
| ೪. | ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ | ೧೨ | ೨೪.೦೦ |
| | **ಒಟ್ಟು** | **೫೦** | **೧೦೦.೦೦** |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

ಈ ಮೇಲಿನ ದತ್ತಾಂಶದ ಪ್ರಕಾರ ಶೇಕಡಾ ೨೪ ರಷ್ಟು ಫಲಾನುಭವಿಗಳು ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕಿನ ಸದಸ್ಯತ್ವವನ್ನು ಪಡೆದಿದ್ದಾರೆ. ಶೇಕಡ ೨೮ ರಷ್ಟು ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕಿನ ಸದಸ್ಯತ್ವವನ್ನು ಪಡೆದಿದ್ದಾರೆ. ಹಾಗೆಯೇ ಶೇಕಡ ೨೪ ರಷ್ಟು ಪಕ್ಷಿಕೆರೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕಿನ ಸದಸ್ಯತ್ವವನ್ನು ಪಡೆದಿದ್ದಾರೆ. ಕೊನೆಯದಾಗಿ ಶೇಕಡ ೨೪ ರಷ್ಟು ಸುರತ್ಕಲ್ ಬ್ಯಾಂಕಿನ ಸದಸ್ಯತ್ವವನ್ನು ಪಡೆದಿದ್ದಾರೆ.

**೪.೪.೧೮ ಸಹಕಾರ ತತ್ವದ ತಿಳುವಳಿಕೆಯ ವಿವರ:**

ಸಹಕಾರ ಎಂದರೆ ಜನರು ತಮ್ಮ ಸ್ವಾರ್ಥವನ್ನು ಮರೆತು ಒಗ್ಗೂಡಿ ಪರಸ್ಪರ ಹಿತಾಸಕ್ತಿಗಳನ್ನು ಕಾಪಾಡಲು ಸಾಂಘಿಕವಾಗಿ ಪ್ರಯತ್ನಿಸುವ ಒಂದು ವ್ಯವಸ್ಥೆಯಾಗಿದೆ.

ತಾನು ಎಲ್ಲರಿಗಾಗಿ ಎಲ್ಲರೂ ತನಗಾಗಿ ಎಂಬುವುದು ಸಹಕಾರದ ಮೂಲ ತತ್ವವಾಗಿದೆ.

| ಕ್ರಮ ಸಂಖ್ಯೆ | ಸಹಕಾರದ ತತ್ವ | ಪ್ರತಿಕ್ರಿಯೆ | ಶೇಕಡವಾರು ವಿವರ (%) |
|---|---|---|---|
| ೧. | ಗಣನೀಯವಾಗಿ ವೃದ್ಧಿಸಿದೆ | ೨೫ | ೫೦.೦೦ |
| ೨. | ಸಾಮಾನ್ಯ ವೃದ್ಧಿಸಿದೆ | ೨೦ | ೪೦.೦೦ |
| ೩. | ವಿಶೇಷವೇನೂ ಇಲ್ಲ | ೦೫ | ೧೦.೦೦ |
| | **ಒಟ್ಟು** | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ

**೪.೪.೧೯ ಕೃ.ಸಂ. ಬ್ಯಾಂಕಿನ ಚಟುವಟಿಕೆಗಳು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಯ ಮೇಲೆ ಬೀರುತ್ತಿರುವ ಪ್ರಭಾವದ ಕುರಿತು ಮಾಹಿತಿ:**

| ಕ್ರಮ ಸಂಖ್ಯೆ | ಬ್ಯಾಂಕಿನ ಚಟುವಟಿಕೆಗಳ ಪ್ರಭಾವ | ಸಂಖ್ಯೆ | ಶೇಕಡವಾರು ವಿವರ (%) |
|---|---|---|---|
| ೧. | ಕೃಷಿಯಲ್ಲಿನ ಪ್ರಗತಿ | ೩೨ | ೬೩.೭೪ |
| ೨. | ಗಣನೀಯ ಪ್ರಗತಿ | ೧೧ | ೨೧.೫೭ |
| ೩. | ಸಾಮಾನ್ಯ ಪ್ರಗತಿ | ೦೫ | ೦೯.೮೦ |
| ೪ | ವಿಶೇಷವೇನೂ ಇಲ್ಲ | ೦೩ | ೦೫.೮೯ |
| | **ಒಟ್ಟು** | ೫೦ | ೧೦೦.೦೦ |

ಮೂಲ: ಸಂಶೋಧನಾ ಕ್ಷೇತ್ರ ಕಾರ್ಯಧಾರಿತ ಮಾಹಿತಿ



ಈ ಮೇಲಿನ ಕೋಷ್ಟಕಗಳಲ್ಲಿ ಕಂಡುಬರುವ ವಿಷಯವೇನೆಂದರೆ ಶೇಕಡಾ ೬೩.೭೪ ರಷ್ಟು ಕೃಷಿಯಲ್ಲಿ ಪ್ರಗತಿಯಾಗಿದೆ ಎಂದು ಗಮನಿಸಬಹುದು. ಆದುದರಿಂದ ಕೃಷಿ ಸಹಕಾರಿ ಬ್ಯಾಂಕಿನ ಚಟುವಟಿಕೆಗಳು ಕೃಷಿಯ ಮೇಲೆ ಸಾಕಷ್ಟು ಮಟ್ಟಿಗೆ ಪ್ರಭಾವ ಬೀರಿ ಕೃಷಿಯಲ್ಲಿ ಪ್ರಗತಿಯನ್ನು ತರುವಲ್ಲಿ ಯಶಸ್ವಿಯಾಗಿದೆ. ಶೇಕಡಾ ೨೧.೫೭ ರಷ್ಟು ಕೃಷಿಯಲ್ಲಿ ಗಣನೀಯ ಪ್ರಗತಿ ಸಾಧಿಸಿದೆ.

**೪.೪.೨೦ ಬ್ಯಾಂಕಿನ ಚಟುವಟಿಕೆಗಳನ್ನು ಇನ್ನಷ್ಟು ಪರಿಣಾಮಕಾರಿಯಾಗಲು ಫಲಾನುಭವಿಗಳು ನೀಡಿದ ಸಲಹೆಗಳ ವಿವರ:**

- ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ೪ ಬ್ಯಾಂಕುಗಳನ್ನು ಸಂದರ್ಶಿಸಲಾಗಿದೆ. ಪಕ್ಷಿಕೆರೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್, ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ, ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕು ಮತ್ತು ಸುರತ್ಕಲ್ ಸೇವಾ ಸಹಕಾರಿ ಬ್ಯಾಂಕ್ ಕ್ಷೇತ್ರ ಕಾರ್ಯದಲ್ಲಿ ಅವಲೋಕಿಸಿದಂತೆ, ಬ್ಯಾಂಕಿನ ವಿಳಾಸ, ಸ್ಥಾಪನೆಯಾದ ವರ್ಷ, ನೌಕರರ ಸಂಖ್ಯೆ, ಬ್ಯಾಂಕಿನ ಉದ್ದೇಶ, ಶೇರ್ ಕ್ಯಾಪಿಟಲ್, ಪ್ರಾರಂಭದ ಬೌಗೋಳಿಕ ವ್ಯಾಪ್ತಿ ಠೇವಣಿಯ ವಿಧಗಳು, ಬ್ಯಾಂಕಿನಲ್ಲಿ ಸ್ಥಾಪನೆ ಅಥವಾ ರಚನೆಗೊಂಡ ಕೆಲವು ಸಂಘಗಳು, ಸಾಲದ ಸೌಲಭ್ಯಗಳು, ಸಾಲದ ಸೌಲಭ್ಯ ಲಾಭಾಂಶ, ಮರುಪಾವತಿ ಗ್ರಾಮಗಳು, ಬ್ಯಾಂಕಿನ ಕಟ್ಟಾದ ಸ್ಥಾನಮಾನ, ಬ್ಯಾಂಕಿನ ಹೆಚ್ಚುವರಿ ಶಾಖೆಗಳು, ಸದಸ್ಯರಲ್ಲಿ ಉಳಿತಾಯ ಪ್ರವೃತ್ತಿ ಮುಂತಾದವುಗಳನ್ನು ನೇರ ಸಂದರ್ಶನದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

- **ಕ್ಷೇತ್ರ ಕಾರ್ಯದಲ್ಲಿ ಕಂಡುಬಂದಂತೆ ಕಿನ್ನಿಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕು.**

೧೯೫೬ ರಲ್ಲಿ ಸ್ಥಾಪನೆಗೊಂಡಿತು, ಬ್ಯಾಂಕಿನ ಕಾರ್ಯನಿರ್ವಹಿಸಲು ೧೨ ಮಂದಿ ನೌಕರ ನೇಮಕ ಮಾಡಲಾಗಿದೆ ಗ್ರಾಮವನ್ನು ಒಳಗೊಂಡಿದೆ. ಮತ್ತು ಪ್ರಾರಂಭದಲ್ಲಿ ಶೇರು ಶಾಖೆಯನ್ನು ಹೊಂದಿದೆ, ಮೂರು ರೀತಿಯ ಠೇವಣಿ ಸೌಲಭ್ಯವಿದೆ, ಬ್ಯಾಂಕಿನಲ್ಲಿ ಅನೇಕ ರೀತಿಯ ಸಾಲಸೌಲಭ್ಯವಿದೆ. ಉದಾಹರಣೆಗಾಗಿ: ಆಭರಣ ಸಾಲ, ವಾಹನ ಸಾಲ, ಮನೆ ಸಾಲ, ಕೃಷಿ ಸಾಲ ಮುಂತಾದವು, ಬ್ಯಾಂಕಿನಲ್ಲಿ ಸರಕಾರಿ ಶೇಕಡಾ ೬೦% ರಷ್ಟು ಮಂದಿಗೆ ಸಾಲದ ಸೌಲಭ್ಯ ಲಭಿಸಿದೆ ಮತ್ತು ಸಾಲದ ಮರುಪಾವತಿ ಸರಿಯಾದ ಸಮಯಕ್ಕೆ ಅಗುತ್ತದೆ. ಬ್ಯಾಂಕು ಒಂದು ಸ್ವಂತ ಕಟ್ಟಡವನ್ನು ಹೊಂದಿದೆ. ಒಂದಕ್ಕಿಂತ ಹೆಚ್ಚುವರಿ ಶಾಖೆಗಳಿವೆ, ಮತ್ತು ಸದಸ್ಯರ ಉಲಿತಾಯ

ಪ್ರವೃತ್ತಿ ಗಣನೀಯವಾಗಿ ವೃದ್ಧಿಸಿದೆ. ಪ್ರಸ್ತುತ ಸಾಲಿನಲ್ಲಿ ೪೨,೫೫,೩೬೪.೦೦ ಲಾಭಾಂಶ ಹೊಂದಿದೆ.

ಕಿನ್ನಗೋಳಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕಿನ ಪ್ರಮುಖ ಉದ್ದೇಶ ಸಹಕಾರ ಮನೋಭಾವನೆಯನ್ನು ಅಭಿವೃದ್ಧಿಗೊಳಿಸಲು ಸದಸ್ಯರುಗಳಲ್ಲಿ ಮಿತವ್ಯಯ, ವ್ಯವಸಾಯ ಉತ್ಪಾದನಾ ಹೆಚ್ಚಿಸಲು ಸದಸ್ಯರಿಗೆ ಸಾಲದ ಸೌಲಭ್ಯ ಮತ್ತು ವ್ಯವಸಾಯಕ್ಕೆ ಬೇಕಾದ ಸಾಮಾಗ್ರಗಳ ಪೂರೈಕೆಯನ್ನು ಒದಗಿಸಲಾಗಿದೆ. ಇದರಿಂದ ಬ್ಯಾಂಕಿನ ಪ್ರಗತಿಯನ್ನು ಕಾಣಬಹುದು.

- **ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್:**

  ಕ್ಷೇತ್ರ ಕಾರ್ಯದಲ್ಲಿ ಕಂಡುಬಂದಂತೆ ಬಜಪೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ೧೯೫೬ ರಲ್ಲಿ ಸ್ಥಾಪನೆಗೊಂಡಿದೆ. ೧೦ ಕ್ಕಿಂತ ಹೆಚ್ಚು ನೌಕರರನ್ನು ಒಳಗೊಂಡಿದೆ, ಪ್ರಾಂರಂಭದಲ್ಲಿ ೨೫ ಸಾವಿರದಷ್ಟು ಶೇರು ಕಾಪಿಟಲ್‌ನ್ನು ಹೊಂದಿದ್ದು ೧೪ ಗ್ರಾಮವನ್ನು ಒಳಗೊಂಡಿದೆ. ಮೂರು ರೀತಿಯ ಠೇವಣಿ ಸಂಚಯನವನ್ನು ಹೊಂದಿದ್ದು, ಜನರಲ್ಲಿ ಉಳಿತಾಯ ಪ್ರವೃತ್ತಿಯನ್ನು ಹೆಚ್ಚಿಸಲು ಸಹಕಾರಿಯಾಗಿದೆ, ಬ್ಯಾಂಕಿನಲ್ಲಿ ರೈತರ ಕೂಟ, ಯಶಸ್ವಿನಿ ಯೋಜನೆ ಸ್ವಸಹಾಯ ಈ ಮೂರು ಸಂಘವನ್ನು ಬ್ಯಾಂಕಿನ ಮೂಲಕ ರಚನೆ ಮಾಡಲಾಗಿದೆ. ಹಾಗೆಯೇ ವಿವಿದ ರೀತಿಯ ಸಾಲವನ್ನು ಜನರಿಗೆ, ನೀಡಲಾಗಿದೆ. ಉದಾಹರಣೆ: ಆಭರಣ ಸಾಲ, ವಾಹನ ಸಾಲ, ಮನೆ ಸಾಲ, ಕೃಷಿ ಸಾಲ ಶೇಕಡಾ ೬೦ ರಷ್ಟು ಸಾಲದ ಸೌಲಭ್ಯ ಜನರಿಗೆ ಕೊಡಲಾಗಿದೆ. ಪ್ರಸ್ತುತ ಸಾಲದಲ್ಲಿ ೫ ಕೋಟಿ ಮರುಪಾವತಿ ಮಾಡಲಾಗಿದೆ. ಬ್ಯಾಂಕು ಒಟ್ಟಿಗೆ ೧೩ ಕ್ಕಿಂತ ಹೆಚ್ಚು ಗ್ರಾಮವನ್ನು ಹೊಂದಿದೆ. ಹಾಗೆಯೇ, ಬ್ಯಾಂಕು ಒಂದು ಸ್ವಂತ ಕಟ್ಟಡ ಹೊಂದಿದ್ದು ೩ ಕ್ಕಿಂತ ಹೆಚ್ಚು ಶಾಖೆಯನ್ನು ಒಳಗೊಂಡಿದೆ. ಆದುದರಿಂದ ಬ್ಯಾಂಕಿನ ಪ್ರಗತಿಯನ್ನು ಕಾಣಬಹುದಾಗಿದೆ.

- **ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್:**

  ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ೧೯೧೨ ರಲ್ಲಿ ಸ್ಥಾಪನೆಗೊಂಡಿದೆ. ಬ್ಯಾಂಕಿನಲ್ಲಿ ೨೧ ರಷ್ಟು ನೌಕರರು ತಮ್ಮ ನಿತ್ಯಾರ್ಪಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಪ್ರಾರಂಭದಲ್ಲಿ ೨೫ ಸಾವಿರದಷ್ಟು ಶೇರ್ ಕ್ಯಾಪಿಟಲ್ ಹೊಂದಿದೆ. ಭೌಗೋಳೀಕ ವ್ಯಾಪ್ತಿ ೧೦ ಗ್ರಾಮಗಳನ್ನು ಒಳಗೊಂಡಿದೆ. ಬ್ಯಾಂಕಿನಲ್ಲಿ ಒಟ್ಟು ನಾಲ್ಕು ರೀತಿಯ ಠೇವಣಿಯ

ಸಂಚಯನವಿದೆ, ಯಶಸ್ವಿನಿ ಯೋಜನೆ ಮತ್ತು ಸ್ವಸಹಾಯ ಸಂಘ ಬ್ಯಾಂಕಿನ ಮೂಲಕ ರಚನೆಗೊಂಡ ಸಂಘಗಳು, ಬ್ಯಾಂಕು ಹಲವಾರು ರೀತಿಯ ಸಾಲ ಸೌಲಭ್ಯವನ್ನು ರೈತರಿಗೆ ಮತ್ತು ಸದಸ್ಯರಿಗೆ ದೊರಕಿಸಿ ಕೊಡಲಾಗಿದೆ. ೭೫% ರಷ್ಟು ಸಾಲದ ಮರುಪಾವತಿ ಸರಿಯಾದ ಸಮಯಕ್ಕೆ ಆಗಿದೆ. ಪ್ರಸ್ತುತ ಸಾಲಿನಲ್ಲಿ ೧,೧೧,೩೧,೯೬೧ ಲಾಭಾಂಶ ಹೊಂದಿದೆ. ಬ್ಯಾಂಕು ೧೦ ಗ್ರಾಮಗಳನ್ನು ಒಳಗೊಂಡಿದ್ದು ಸ್ವಂತ ಕಟ್ಟಡ ಹೊಂದಿದ್ದ ಒಂದಕ್ಕಿಂತ ಹೆಚ್ಚು ಶಾಖೆಗಳನ್ನು ಹೊಂದಿದ್ದು ಜನರಲ್ಲಿ ಉಳಿತಾಯ ಪ್ರವೃತ್ತಿಯನ್ನು ಹೆಚ್ಚಿಸಲು ಸ್ವತತ ಪ್ರಯತ್ನ ಮಾಡಲಾಗಿದೆ. ಇದರಿಂದ ಕಂಡುಬಂದ ವಿಷಯವೇನೆಂದರೆ ಉಳಿತಾಯ ಪ್ರವೃತ್ತಿ ಗಣನೀಯವಾಗಿ ವೃದ್ಧಿಸಿದೆ.

- **ಪಕ್ಷಿಕೆರೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್:**

ಪಕ್ಷಿಕೆರೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿಯಮಿತ ಸಂದರ್ಭದಲ್ಲಿ ಕಂಡುಬಂದಂತೆ ೨೦೧೨ ರಲ್ಲಿ ಸ್ಥಾಪನೆಗೊಂಡಿದೆ. ಬ್ಯಾಂಕಿನಲ್ಲಿ ಒಟ್ಟು ೩ ನೌಕರಿಂದು ಅವರ ನಿಸ್ವಾರ್ಥ ಸೇವೆ, ಜನರ ಅಭಿವೃದ್ಧಿಗೆ ಒಂದು ದೇ ಬ್ಯಾಂಕಿನ ಮುಖ್ಯ ಉದ್ದೇಶವೇನೆಂದರೆ ಬ್ಯಾಂಕಿನ ಕಾರ್ಯ ವ್ಯಾಪ್ತಿಯಲ್ಲಿ ಬರುವ ಸದಸ್ಯರಿಗೆ ಮತ್ತು ಸಾದ್ಯತೇತರಿಗೆ ಸಾಲದ ವ್ಯವಸ್ಥೆ, ಉಳಿತಾಯ ಪ್ರವೃತ್ತಿಯ ಬಗ್ಗೆ ಹೆಚ್ಚು ಕಾಳಜಿವಹಿಸಲಾಗಿದೆ. ಪ್ರಾರಂಭದಲ್ಲಿ ೮ ಗ್ರಾಮಗಳನ್ನು ಒಳಗೊಂಡಿದ್ದ ೩ ರೀತಿಯ ಠೇವಣಿ ಸಂಚಯನವನ್ನು ಹೊಂದಿದೆ. ಅವುಗಳೆಂದರೆ: ಉಳಿತಯಖಾತೆ, ನಿರಖು ಠೇವಣಿ ಮತ್ತು ಮಾಸಿಕ ಠೇವಣಿ, ಮುಂತಾದವು ಸ್ವಸಹಾಯ ಸಂಘ ಬ್ಯಾಂಕಿನ ಮೂಲಕ ರಚನೆಗೊಂಡ ಸಂಘವಾಗಿದೆ. ಇದರಿಂದ ಕಾರ್ಯವ್ಯಾಪ್ತಿಯಲ್ಲಿ ಬರುವ ಜನರಿಗೆ ಉಳಿತಾಯ ಪ್ರವೃತ್ತಿಯನ್ನು ಹೆಚ್ಚಿಸಲು ಪ್ರೋತ್ಸಾಹಿಸಲಾಗಿದೆ. ಪ್ರಸ್ತುತ ಸಾಲಿನಲ್ಲಿ ೫೧೯ ಜನರಿಗೆ ಸಾಲ ಸೌಲಭ್ಯವನ್ನು ದೊರಕಿಸಿಕೊಡಲಾಗಿದೆ. ಶೇಕಡ ೧೦೦ ರಷ್ಟು ಸಾಲದ ಮರುಪಾವತಿ ಸರಿಯಾದ ಸಮಯಕ್ಕೆ ಆಗಿದೆ. ೭ರಿಂದ ೯ರಷ್ಟು ಗ್ರಾಮಗಳನ್ನು ಒಳಗೊಂಡಿದ್ದು, ಖಸಗಿಕಟ್ಟಡವನ್ನು ಹೊಂದಿದೆ. ಮತ್ತು ಸದಸ್ಯರಲ್ಲಿ ಉಳಿತಾಯ ಪ್ರವೃತ್ತಿ ಗಣನೀಯವಗಿ ವೃದ್ಧಿಸಿದೆ. ಇದರಿಂದ ಒಂದೂವರೆ ವರ್ಷದಲ್ಲಿ ಬ್ಯಾಂಕಿನಲ್ಲಿ ಆದ ಪ್ರಗತಿಯನ್ನು ಗುರುತಿಸಬಹುದು.

- **ಉಪಸಂಹಾರ:**

  ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನಾಲ್ಕು ಬ್ಯಾಂಕುಗಳನ್ನು ಮತ್ತು ಐದು ಸಂಘಗಳನ್ನು ಸಂದರ್ಶಿಸಿದಾಗ ಕಂಡುಬಂದ ಮಾಹಿತಿಯೇನೆಂದರೆ, ನಾಲ್ಕು ಬ್ಯಾಂಕುಗಳು ಪ್ರಗತಿ ಪಥದಲ್ಲಿ ಮುಂದುವರಿಯುತ್ತಿವೆ. ಹಾಗೆಯೇ ಐದು ಸಹಕಾರಿ ಸಂಘಗಳು, ಸದಸ್ಯರಿಗೆ ಅತೀ ಕಡಿಮೆ ಬೆಲೆಯಲ್ಲಿ ಆಹಾರಧಾನ್ಯಗಳು, ಸಬ್ಸಿಡಿ, ರಸಗೊಬ್ಬರಗಳು, ಕೃಷಿಗೆ ಬೇಕಾದ ಕೃಷಿ ಸಲಕರಣೆಗಳು ಮುಂತಾದವನ್ನು ಒದಗಿಸುವಲ್ಲಿ ಯಶಸ್ವಿಯಾಗಿದೆ. ಕ್ಷೇತ್ರದ ಕಾರ್ಯ ಸಂದರ್ಭದಲ್ಲಿ ಪ್ರಾಥಮಿಕ ಮತ್ತು ಪೂರಕಮಾಹಿತಿಯನ್ನು ಸಂಶೋಧನೆಯ ದೃಷ್ಟಿಯಿಂದ ಪಡೆಯಲಾಗಿದೆ ಮತ್ತು ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್. ಮೂರು ಬ್ಯಾಂಕಿಗಿಂತ ಭಿನ್ನವಾಗಿ ಎಂದು ಹೇಳಿದರೆ ತಪ್ಪಾಗಲಾರದು, ಹಾಗೆಯೇ ಸಾಲದ ಸೌಲಭ್ಯವನ್ನು ಕೊಡುವಲ್ಲಿ ಯಶಸ್ವಿಯಾಗಿದೆ, ಮಾತ್ರವಲ್ಲದೆ, ಕೃಷಿಗೆ ಸಂಬಂಧ ಪಟ್ಟ ಎಲ್ಲಾ ಮಾಹಿತಿಯನ್ನು ಸರಿಯಾದ ಸಮಯಕ್ಕೆ ರೈತರಿಗೆ ಮತ್ತು ಸದಸ್ಯರಿಗೆ ನೀಡುತ್ತಾರೆ. ಆದುದರಿಂದ ಎಲ್ಲಾ ಬ್ಯಾಂಕುಗಳಲ್ಲಿ ಪ್ರಗತಿಯನ್ನು ಕಾಣಬಹುದಾಗಿದೆ.

# ಅಧ್ಯಾಯ ೫

## ಅಧ್ಯಯನದ ಫಲಿತಗಳು

ಅಧ್ಯಯನದ ಕೊನೆಯ ಅಧ್ಯಾಯವಾಗಿರುವ ಈ ಅಧ್ಯಯನದಲ್ಲಿ ಅಧ್ಯಯನದ ಫಲಕಗಳನ್ನು ನೀಡಲಾಗಿದೆ. ಅಧ್ಯಯನದ ಫಲಿತಾಂಶ ಇನ್ನಷ್ಟು ಸಂಶೋಧನಾ ಸಾಧ್ಯತೆಗಳು ಮತ್ತು ಸಂಕ್ಷಿಪ್ತ ಉಪಸಂಹಾರವನ್ನು ನೀಡಲಾಗಿದೆ.

೧.೧ ಅಧ್ಯಯನದ ಫಲಿತಾಂಶಗಳು

ಸಮಾಜದಲ್ಲಿನ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಜನರ ಸಂಕಷ್ಟಗಳು ಇಂದಿನ ನಾಗರಿಕ ಸಮಾಜದ ಮುಂದಿರುವ ಅತೀ ದೊಡ್ಡ ಸವಾಲಾಗಿದೆ. ನಮ್ಮ ನಡುವೆ ಇರುವ ಇಂತಹ ಹಿಂದುಳಿದ ಜನರ ಕಷ್ಟ ಕಾರ್ಪಣ್ಯಗಳನ್ನು ಹೋಗಲಾಡಿಸಲು ಒಂದು ಸಂಘಟಿತ ಹೋರಾಟವನ್ನು ಮಾಡಬೇಕಿದೆ. ನಿರಂತರವಾದ ಸಹಕಾರಿ ವಲಯದ ಅಭಿವೃದ್ಧಿಗೆ ತೊಡಗಿಸಿಕೊಳ್ಳುವ ಮೂಲಕ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ಜನರಲ್ಲಿ ಶಕ್ತಿ ಮತ್ತು ಸಾಮರ್ಥ್ಯಗಳನ್ನು ಸೃಷ್ಟಿಸುವುದು ಇನ್ನಿತರೆ ಯಾವುದೇ ಸಂಘಟಿತ ಮಾರ್ಗಗಳಿಗಿಂತ ಹೆಚ್ಚು ಶಕ್ತಿಯುತವಾದ ಮತ್ತು ಸೂಕ್ತವಾದ ಮಾರ್ಗವಾಗಿರುತ್ತದೆ. ಪರಸ್ಪರ ಹೊಂದಾಣಿಕೆಯಿಂದ ಎಲ್ಲಾ ಜನರು ಸಹಕಾರ ರಂಗದಲ್ಲಿ ಭಾಗವಹಿಸಿದರೆ ಅದರಿಂದ ಹೆಚ್ಚು ಅನುಕೂಲವಾಗುತ್ತದೆ. ಮಾನವ ಮೂಲಭೂತ ವರ್ತನೆಯಲ್ಲಿ ಸೇರಿಕೊಂಡಿರುವ ಸ್ವಯಂ ಮೌಲ್ಯವು ಸಹಕಾರಿ ತತ್ವದಲ್ಲಿ ಪ್ರಧಾನವಾಗಿರುವ್ಯದರಿಂದ ನಮ್ಮಂತಹ ರಾಷ್ಟ್ರಕ್ಕೆ ಅದರಲ್ಲೂ ಕರ್ನಾಟಕದಲ್ಲಿನ ಸಹಕಾರ ಕ್ಷೇತ್ರದ ನಿರ್ವಹಣೆಗೆ ಸೂಕ್ತವಾಗಿರುತ್ತದೆ. ಸಹಕಾರ ತಂತ್ರವು ವಿಶೇಷವಾಗಿ ಗ್ರಾಮೀಣ ಬಡ ಜನತೆಯಲ್ಲಿ ಹಣಕಾಸು ಸಾಮರ್ಥ್ಯವನ್ನು ಮತ್ತು ಆತ್ಮವಿಶ್ವಾಸವನ್ನು ತುಂಬುವಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ. ಈ ಮಹೋನ್ನತ ಉದ್ದೇಶವನ್ನು ಸಾಧಿಸುವುದಕ್ಕಾಗಿ ಸಹಸ್ರಾರು ಸಹಕಾರ ಸಂಘಗಳು ರಾಜ್ಯಾದ್ಯಂತ ನಿರಂತರವಾಗಿ ಕೆಲಸ ಮಾಡುತ್ತಿದೆ. ಹಾಗೂ ಅತ್ಯಂತ ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸುತ್ತಿವೆ. ಈ ವಸ್ತುಸ್ಥಿತಿಯಲ್ಲಿ ಕೈಗೊಂಡ ನಮ್ಮ ಅಧ್ಯಯನವು ಗ್ರಂಥಗಳು, ಲೇಖನಗಳು, ವರದಿಗಳು ಮತ್ತು ಪೂರ್ವಾಧ್ಯಯನದ ಪರಾಮರ್ಶೆ ಹಾಗೂ ಅದರ ಆಧಾರದಲ್ಲಿ ಮಾಡಲಾದ ವಿಶ್ಲೇಷಣೆ ಮತ್ತು ಕ್ಷೇತ್ರಕಾರ್ಯದಾರಿತ ಅಧ್ಯಯನವನ್ನು ಒಳಗೊಂಡಿರುತ್ತದೆ. ಆಯ್ದ ಅಧ್ಯಯನದ ವ್ಯಾಪ್ತಿ ಸೀಮಿತವಾಗಿದ್ದರೂ ಅಲ್ಲಿ ಒಳಗೊಂಡಿರಬೇಕಾದ ವಿಷಯಗಳು

ಯಾವುದೆನ್ನುವುದು ಸ್ಪಷ್ಟವಿದ್ದ ಕಾರಣ ಕೆಲವು ನಿರ್ದಿಷ್ಟವಾದ ಮತ್ತು ನಿಖರವಾದ ಅಧ್ಯಯನ – ಫಲಿತಾಂಶಗಳನ್ನು ಪಡೆದುಕೊಳ್ಳುವುದಕ್ಕೆ ಸಾಧ್ಯವಾಯಿತು. ಅವುಗಳೆಂದರೆ

ದಕ್ಷಿಣ ಕನ್ನಡ ಜಿಲ್ಲೆ ಮತ್ತು ಮಂಗಳೂರು ತಾಲೂಕಿನಲ್ಲಿರುವ ಸಹಕಾರ ಕ್ಷೇತ್ರದ ಪ್ರಗತಿ ಮತ್ತು ಬೆಳವಣಿಗೆಯ ವಿಧಾನವನ್ನು ನಮ್ಮ ಅಧ್ಯಯನದ ಬ್ಯಾಂಕುಗಳಲ್ಲೂ ಗುರುತಿಸಬಹುದು.

ಸದಸ್ಯತನದ ಸಂಪನ್ಮೂಲ ಸಂಚಯನ ಸಾಲನೀಡಿಕೆ, ಠೇವಣಿ ವಿಧಾನ ಯೋಜನೆಗಳ ಅನುಷ್ಠಾನ ಮತ್ತು ಸದಸ್ಯರಿಗೆ ಅನುಕೂಲ ಕಲ್ಪಿಸುವ ಸಹಕಾರ ತತ್ವಧಾರಿತ ಚಟುವಟಿಕೆಗಳನ್ನು ಎರಡೂ ಬ್ಯಾಂಕುಗಳು ಸಕಾಲಿಕವಾಗಿ ಮತ್ತು ಸಂಪರ್ಕವಾಗಿ ರೂಪಿಸುತ್ತಿವೆ, ಕಾರ್ಯಗತಗೊಳಿಸುತ್ತಿವೆ.

ಜನರ ಸಹಕಾರ ತತ್ವದ ತಿಳುವಳಿಕೆಯ ಪ್ರಮಾಣ, ಸಮಾಜ ಸಂಪರ್ಕ ನಾಯಕತ್ವ ಮತ್ತು ಪೂರ್ವಗಾಮಿ ಮನಸ್ಥಿತಿಗೆ ಈ ಸಹಕಾರಿ ಬ್ಯಾಂಕುಗಳು ಉತ್ತಮ ವೇದಿಕೆಗಳಾಗಿವೆ.

ಬ್ಯಾಂಕುಗಳ ಸಹಕಾರದಿಂದ ಕೃಷಿ ಮತ್ತು ಗ್ರಾಮ್ಭಿಣಾಭಿವೃದ್ಧಿ ಸಾಧ್ಯವಾಗುವಂತೆ ಗ್ರಾಮೀಣ ಚಟುವಟಿಕೆಗಳ ಹೆಚ್ಚಳ ಬ್ಯಾಂಕಿಂಗ್ ಪ್ರಗತಿಗೂ ಪೂರಕವಾಗಿದೆ.

**೧.೨: ಸಲಹೆ ನೀತಿ ನಿರೂಪಣೆ:**

ಪ್ರಗತಿಯು ಪ್ರಮಾಣ ಎಷ್ಟಿದ್ದರೂ ಇನ್ನಷ್ಟನ್ನು ಸಾಧಿಸುವುದು ಸಾಧ್ಯ ಎಂಬುದನ್ನು ಮರೆಯಬಾರದು. ಪ್ರಗತಿಯ ಹೆಚ್ಚಳ, ಕ್ಷಿಪ್ರ ಪ್ರಗತಿ ಮತ್ತು ಗಳಿಸಿದ ಪ್ರಗತಿಯ ಕಾಯ್ದುಕೊಳ್ಳುವಿಕೆ. ಸಹಕಾರಿ ಬ್ಯಾಂಕುಗಳ ದೀರ್ಘಕಾಲಿಕವಾದ ಬೆಳವಣಿಗೆಯಲ್ಲಿ ಪ್ರಧಾನ ಅಂಶಗಳಾಗಿವೆ. ನಮ್ಮ ಅಧ್ಯಯನದ ಅಧಾರದಲಿ ಕೆಳಗೆ ನೀಡಲಾದ ಕೆಲವು ಸಲಹೆ ಸೂಚನೆಗಳು ಮತ್ತು ಅದಕ್ಕೆ ಪೂರಕವಾದ ನೀತಿ ನಿರೂಪಣೆಗಳು ಈ ರೀತಿಯ ಪ್ರಗತಿಯ ಗಳಿಸುವಿಕೆಗೆ ಪೂರಕವಾಗಬಲ್ಲವು

- ❖ ಶಾಖಾ ವಿಸ್ತರಣೆ ಬ್ಯಾಂಕಿಂಗ್ ಚಟುವಟಿಕೆಗಳ ವ್ಯಾಪ್ತಿಯ, ವಿಸ್ತಾರ ವಿಕೇಂದ್ರಿಕರಣ
- ❖ ವರ್ಷದ ನಿಗದಿತ ಅವಧಿಯಲ್ಲಿ ಠೇವಣಿ ಸಂಗ್ರಹ, ಸಂಪನ್ಮೂಲ ಸಂಚಯನದ ಪ್ರಯತ್ನಗಳನ್ನು ಮುಂದುವರಿಸಿ ಇನ್ನಷ್ಟು ತೀವ್ರಗೊಳಿಸುವ ಯೋಜನೆಗಳ ರೂಪೀಕರಣ ಅನುಷ್ಠಾನ.

**ವಿಸ್ತಾರವಾದ ಅಧ್ಯಯನಕ್ಕೆ**

- ❖ ಸದಸ್ಯರಿಗೆ ಆಡಳಿತ ನಡೆಸುವವರಿಗೆ ಅಧುನಿಕ ತಂತ್ರಜ್ಞಾನ ತರಬೇತಿ ಇದರ ಯಶಸ್ವೀ ಪ್ರಯೋಗ ನಿರಂತರ ಪ್ರಯತ್ನ
- ❖ ಇತರ ಸಹಕಾರಿ ಸಂಘಟನೆಗಳ ಜೊತೆ ಸಂಬಂಧ ಸಂಪರ್ಕ ಅನುಭವ ವಿನಿಮಯದ ಸಕಾಲಿಕ ಪ್ರಕ್ರಿಯೆಗಳ ಮುಂದುವರಿಕೆಯುವಿಕೆ.
- ❖ ಇದಕ್ಕೆ ಪೂರಕವಾಗುವ ಸಹಕಾರೀ ತತ್ವದ ಪ್ರಚಾರಕ್ಕೆ ಸರಕಾರದ ಧೋರಣೆಯಲ್ಲಿ ಅಗತ್ಯ ಬದಲಾವಣೆಗಳನ್ನು ತರುವುದು.

**೧.೩ ಭವಿಷ್ಯದ ಸಂಶೋಧನಾ ಸಾಧ್ಯತೆಗಳು:**

ಯಾವಾಗಲೂ ಒಂದು ಅಧ್ಯಯನವು ಆಯ್ದ ವಿಷಯದ ಕುರಿತು ಹೊಸ ಬೆಳಕು ಚೆಲ್ಲುವಂತೆ ಮುಂದೆ ನಡೆಸಬೇಕಾದ ಇನ್ನಷ್ಟು ಅಧ್ಯಯನದ ಸಾಧ್ಯತೆಗಳನ್ನು ಪರೋಕ್ಷಕವಾಗಿ ತಿಳಿಸುತ್ತದೆ. ಸಂಶೋಧನಾತ್ಮಕ ಅಧ್ಯಯನವು ನಿರಂತರವಾಗಿರಬೇಕು. ಈ ಹಿನ್ನಲೆಯಲ್ಲಿ ನಮ್ಮ ಅಧ್ಯಯನಕ್ಕೆ, ಸಂಬಂಧಿಸಿದಂತೆ ಕೈಗೊಳ್ಳಬಹುದಾದ ಇನ್ನಷ್ಟು ಅಧ್ಯಯನದ ವಿಚಾರಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

- ❖ ಇದೇ ಅಧ್ಯಯನದದಲ್ಲಿ ಇನ್ನೂ ಹೆಚ್ಚಿನ ಸಮಯಾವಧಿಗೆ ಅನ್ವಯವಾಗುವಂತೆ ಕೈಗೊಂಡರೆ ಬ್ಯಾಂಕು ಮತ್ತು ಅದರ ಕಾರ್ಯಕ್ಷೇತ್ರದ ಇನ್ನೂ ಅನೇಕ ವಿಷಯಗಳನ್ನು ತಿಳಿದುಕೊಳ್ಳಬಹುದು.
- ❖ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಮಾತ್ರವಲ್ಲದೆ ಬ್ಯಾಂಕಿನ ಇತರ ಚಟುವಟಿಕೆಗಳ ಅಧ್ಯಯನ ನಡೆಸಿದಲ್ಲಿ ಸಹಕಾರ ಮತ್ತು ಪ್ರದೇಶಾಭಿವೃದ್ಧಿಯ ಸಂಬಂಧಗಳ ಅನೇಕ ಅಯಾಮಗಳನ್ನು ಬೆಳೆಸಿಕೊಳ್ಳಬಹುದು ಮತ್ತು ಹೊಸ ಸಹಕಾರ ತತ್ವಾಧಾರಿತ ಅಭಿವೃದ್ಧಿ ಸಿದ್ಧಾಂತವೊಂದನ್ನು ಪರೀಕ್ಷಾರ್ಥವಾಗಿ ರೂಪಿಸಿಕೊಳ್ಳಬಹುದು.
- ❖ ಇತರ ಪ್ರದೇಶದ ಸಹಕಾರಿ ಬ್ಯಾಂಕುಗಳ ನಿರ್ವಹಣೆಯ ಜೊತೆ ನಮ್ಮ ಅಧ್ಯಯನದ ಬ್ಯಾಂಕುಗಳ ನಿರ್ವಹಣೆಯನೇ ಹೋಲಿಕೆ ಮಾದಿ ಅದರ ಅಧಾರದಿಂದ ಇಲ್ಲಿನ ಕುಂದು ಕೊರತೆಗಳನ್ನು ಪತ್ತೆ ಹಚ್ಚಿ ಪರಿಹಾರೋಪಾಯಗಳನ್ನು ಗುರುತಿಸಿಕೊಳ್ಳಬಹುದು.
- ❖ ಇಂತಹ ಸೂಕ್ಷ್ಮ ಹಾಗೂ ಪ್ರದೇಶಾದಾರಿತ ಕ್ಷೇತ್ರಾಧ್ಯಯನ ಮುಂದೆ ವಿಸ್ತಾರವಾದ ಅಧ್ಯಯನದ ಮೂಲವಾಗಬೇಕು.

**ಉಪಸಂಹಾರ**

ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಸಹಕಾರಿ ಬ್ಯಾಂಕು ಮತ್ತು ಸಂಘಗಳ ಪಾತ್ರ ಮಂಗಳೂರು ತಾಲೂಕಿನ ಆಯ್ದ ಬ್ಯಾಂಕುಗಳ ಒಂದು ಅಧ್ಯಯನ ಎಂಬ ಈ ಅಧ್ಯಯನವು ನಾಲ್ಕು ಬ್ಯಾಂಕುಗಳನ್ನು ಮತ್ತು ಐದು ಸಂಘಗಳನ್ನು ಪ್ರತ್ಯಕ್ಷವಾಗಿ ಕಂಡು ಅಲ್ಲಿನ ಸದಸ್ಯರನ್ನು ಫಲಾನುಭವಿಗಳನ್ನು ಮತ್ತು ಆಡಳಿತ ನಡೆಸುವವರನ್ನು ಸಂಪರ್ಕಿಸಿ ಅದರಿಂದ ವಿಧಿ ಪೂರ್ವಕವಾಗಿ ಮಾಹಿತಿಯನ್ನು ಸಂಗ್ರಹಿಸಿ ಕೈಗೊಂಡ ಅಧ್ಯಯನವಾಗಿರುತ್ತದೆ. ಅನೇಕ ಇತಿಮಿತಿ ಲೋಪ ದೋಷಗಳ ಹೊರತಾಗಿಯೂ ಇಲ್ಲಿ ನಡೆಸಿದ ಕ್ಷೇತ್ರ ಕಾರ್ಯ ಮತ್ತು ಪಡೆದುಕೊಂಡ ಮಾಹಿತಿ ತನ್ನ ಪ್ರತ್ಯೇಕತೆಯನ್ನು ಅನನ್ಯತೆಯನ್ನು ಉಳಿಸಿಕೊಳ್ಳುತ್ತದೆ. ಅದುದರಿಂದ ಕೃಷಿ ಸಹಕಾರಿ ಬ್ಯಾಂಕುಗಳು ಸರಿಯಾದ ಸಮಯಕ್ಕೆ ಮಾಹಿತಿಯನ್ನು ದೊರಕಿಸಿಕೊಡುತ್ತದೆ.

## ಪರಾಮರ್ಶನ ಗ್ರಂಥಗಳು


೧. ಎಚ್.ಆರ್. ಕೃಷ್ಣಮೂರ್ತಿ (೨೦೧೨), ಕರ್ನಾಟಕ ಆರ್ಥಿಕತೆ, ಬೆಂಗಳೂರು; ಸಪ್ನ ಬುಕ್ ಹೌಸ್.

೨. ಎಂ.ಚಂದ್ರ ಪೂಜರಿ (೨೦೧೧), ಸಂಶೋಧನ ಪ್ರಸ್ತಾವ, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೩. ಎಂ.ಚಂದ್ರ ಪೂಜರಿ (೨೦೧೧), 'ಸಮಾಜ ಸಂಶೋಧನೆ; ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ

೪. ಎಚ್ಚಾರ್ಕೆ (೨೦೧೦), 'ಭಾರತದ ಆರ್ಥಿಕತೆ; ಬೆಂಗಳೂರು; ಸಪ್ನ ಬುಕ್ ಹೌಸ್.

೫. ಡಾ. ಜಿ.ಕೆ ಗಿರಿಜೇಶ್ (೨೦೧೪), "ಕೃಷಿ ಕ್ಷೇತ್ರದಲ್ಲಿ ದೂರ ಸಂವೇದಿ ತಂತ್ರಜ್ಞಾನ", ಬೆಂಗಳೂರು; ಸಪ್ನ ಬುಕ್ ಹೌಸ್.

೬. ಸುರತ್ಕಲ್ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿತಮಿತ (೨೦೧೨), ಶತ ಸಂಭ್ರಮ ಸ್ಮರಣ ಸಂಚಿಕೆ, ಅಮೃತಸೌಧ ಕಟ್ಟಡ ಸುರತ್ಕಲ್.

೭. ಕಿನ್ನಿಗೋಳಿ ವ್ಯವಸಾಯ ಸೇವಾಸಹಕಾರಿ ಬ್ಯಾಂಕಿನ ವಾರ್ಷಿಕ ವರದಿ (೨೦೧೦-೧೧, ೨೦೧೧-೧೨, ೨೦೧೨-೧೩)

೮. ಬಜಪೆ ವ್ಯವಸಾಯ ಸೇವಾಸಹಕಾರಿ ಬ್ಯಾಂಕಿನ ವಾರ್ಷಿಕ ವರದಿ (೨೦೧೦-೧೧, ೨೦೧೧-೧೨, ೨೦೧೨-೧೩)

೯. ಸುರತ್ಕಲ್ ವ್ಯವಸಾಯ ಸೇವಾಸಹಕಾರಿ ಬ್ಯಾಂಕಿನ ವಾರ್ಷಿಕ ವರದಿ (೨೦೧೦-೧೧, ೨೦೧೧-೧೨, ೨೦೧೨-೧೩)

೧೦. ಬಜಪೆ ವ್ಯವಸಾಯ ಸೇವಾಸಹಕಾರಿ ಬ್ಯಾಂಕಿನ ಸುವರ್ಣ ಮಹೋತ್ಸವ ಸ್ನೇಹಾಬಂದು ಸ್ಮರಣಸಂಚಿಕೆ ೨೦೦೭

೧೧. ಜೀವಿಜೋಶಿ ಮತ್ತು ನೋರ್ಬಟ್ ಲೋಬೋ (೨೦೦೯) "ಕರಾವಳಿ ಕರ್ನಾಟಕದ ಆರ್ಥಿಕ ವ್ಯವಸ್ಥೆ ಹಿಂದಿನಿಂದ ಇಂದಿನವರೆಗೆ", ಮಂಗಳೂರು ಮಂಗಳಪ್ರಕಾಶನ.

೧೨. ಎಚ್. ಆರ್. ಕೃಷ್ಣಮೂರ್ತಿ, (2002), "ಭಾರತದ ಆರ್ಥಿಕ ವ್ಯವಸ್ಥೆ, ಬೆಂಗಳೂರು: ಸಪ್ನ ಬುಕ್ ಹೌಸ್.

೧೩. puri v.k , mishra s.k . (2010), "Indian Economy" New Delhi: Revised Edition, Himalay Publishing House

ವಿಷಯ ಪತ್ರಿಕೆಗಳು :

1. S. Arockia Bas Karan (2009), "The need to Professionalize Indias Agriculture", in, M.M. Kothari (Ed) the economic chanallenger, Vol.x:No:1, December, 62-66page
2. B.S. Naregal (2012), Agricaluture Marketing laws and regulations in india:A legal Perspective" in shewtha odeyar (Ed) Journal of development and social change, Vol.VII: No:3, April-June, 20-27page
3. N. Prakash (2013), "Agrarian system in Karnataka upto 1300.A.D" in odeyar D. Heggade (ED) Journal of development and social change, Vol (1) December 27-31page
4. Economical poltical weekly

ಅಂತರ್ಜಾಲ ತಾಣಗಳು:

1. http//: n. Wikipedia.org/wiki/ agriculture-in-india
2. http//: n.wikipedia.org/wiki/Dakshina-Kannada
3. www.google.com

## ಅನುಬಂಧ ೧

## ಕೋಷ್ಟಕಗಳ ಪಟ್ಟಿ

# ಅನುಬಂಧ –೨

## ಸಂದರ್ಶನ ಅನುಸೂಚಿ (ಬ್ಯಾಂಕಿಗೆ)

ತಾರೀಕು :

ದೂರವಾಣಿ

ಸಂಖ್ಯೆ :

1. ಬ್ಯಾಂಕಿನ ಹೆಸರು, ವಿಳಾಸ :

2. ಬ್ಯಾಂಕು ಸ್ಥಾಪನೆಯಾದ ವರ್ಷ :

3. ಬ್ಯಾಂಕಿನಲ್ಲಿ ಇರುವ ಒಟ್ಟು ನೌಕರರ ಸಂಖ್ಯೆ :

   ಅ. 1–3 ☐

   ಆ. 4–6 ☐

   ಇ. 7–9 ☐

   ಈ. 10–12 ☐

   ಈ 12ಕ್ಕಿಂತ ಹೆಚ್ಚು ☐

4. ನಿಮ್ಮ ಬ್ಯಾಂಕಿನ ಪ್ರಮುಖ ಉದ್ದೇಶ ಯಾವುದು?

5. ಪ್ರಾರಂಭದಲ್ಲಿ ಶೇರ್ ಕ್ಯಾಪಿಟಲ್ ಎಷ್ಟು?

6. ಪ್ರಾರಂಭದಲ್ಲಿ ಭೌಗೋಳಿಕ ವ್ಯಾಪ್ತಿ?

7. ನಿಮ್ಮ ಬ್ಯಾಂಕಿನಲ್ಲಿ ಎಷ್ಟು ರೀತಿಯಲ್ಲಿ ಠೇವಣಿ ಸಂಚಯನ ಸೌಲಭ್ಯವಿದೆ?

   ಅ. ಉಳಿಯಾತ ಖಾತೆ ☐

   ಆ. ಚಾಲ್ತಿ ಖಾತೆ ☐

   ಇ. ನಿರಖು ಠೇವಣಿ ☐

   ಈ. ಮಾಸಿಕ ಠೇವಣಿ ☐

8. ನಿಮ್ಮ ಬ್ಯಾಂಕಿನಲ್ಲಿ ಯಾವುದೆಲ್ಲ ಸಂಘಗಳನ್ನು ರಚಿಸಿದ್ದೀರಿ?

   ಅ. ರೈತರ ಕೂಟ ☐

   ಆ. ಯಶಸ್ವಿನಿ ಯೋಜನೆ ☐

ಇ. ಸ್ವ–ಸಹಾಯ ಸಂಘ ☐

9. ನಿಮ್ಮ ಬ್ಯಾಂಕಿನಲ್ಲಿ ಯಾವುದಕ್ಕೆಲ್ಲ ಸಾಲದ ಸೌಲಭ್ಯ ಕೊಡುತ್ತೀರಿ?

ಅ. ಆಭರಣ ಸಾಲ ☐

ಆ. ವಾಹನ ಸಾಲ ☐

ಇ. ಮನೆ ಸಾಲ ☐

ಈ. ಕೃಷಿ ಸಾಲ ☐

10. ನಿಮ್ಮ ಬ್ಯಾಂಕಿನಲ್ಲಿ ಸರಸಾರಿ ಶೇಕಡಾ ಎಷ್ಟು ಮಂದಿಗೆ ಸಾಲದ ಸೌಲಭ್ಯ ಕೊಟ್ಟಿದ್ದೀರಿ?

11. ನಿಮ್ಮ ಬ್ಯಾಂಕಿನಲ್ಲಿ 2013ರಿಂದ 2014ರ ಲಾಭಾಂಶ ಎಷ್ಟು?

12. ಸಾಲದ ಮರುಪಾವತಿ ಸರಿಯಾದ ಸಮಯಕ್ಕೆ ಆಗುತ್ತಿದೆಯಾ?

ಅ. ಹೌದು ☐

ಆ. ಇಲ್ಲ ☐

13. ಹೌದಾದರೆ ವಿವರಣೆ ನೀಡಿರಿ

14. ಇಲ್ಲವಾದರೆ ವಿವರಣೆ ನೀಡಿರಿ

15. ನಿಮ್ಮ ಬ್ಯಾಂಕ್ ಎಷ್ಟು ಗ್ರಾಮಗಳನ್ನು ಒಳಗೊಂಡಿದೆ?

ಅ. 1–3 ☐

ಆ. 4–6 ☐

ಇ. 7–9 ☐

16. ಬ್ಯಾಂಕಿನ ಕಟ್ಟಡದ ಸ್ಥಾನಮಾನ

ಅ. ಸ್ವಂತ ಕಟ್ಟಡ ☐

ಆ. ಖಾಸಗಿ ಕಟ್ಟಡ ☐

ಇ. ಸರಕಾರಿ ಕಟ್ಟಡ ☐

17. ನಿಮ್ಮ ಬ್ಯಾಂಕಿಗೆ ಹೆಚ್ಚುವರಿ ಇರುವ ಶಾಖೆಯ ವಿವರ ನೀಡಿರಿ.

ಅ. 1–2 ☐

ಆ. 3–4 ☐

ಇ. 4ಕ್ಕಿಂತ ಮೇಲೆ ☐

18. ಸದಸ್ಯರಲ್ಲಿ ಉಳಿತಾಯ ಪ್ರವೃತ್ತಿ:

ಅ. ಗಣನೀಯವಾಗಿ ವೃದ್ಧಿಸಿದೆ ☐

ಆ. ಸಾಮಾನ್ಯವಾಗಿ ವೃದ್ಧಿಸಿದೆ ☐

ಇ. ವಿಶೇಷವೇನೂ ಇಲ್ಲ ☐

************

## ಅನುಬಂಧ –೩

## ಸಂದರ್ಶನ ಅನುಸೂಚಿ (ಸದಸ್ಯರಿಗೆ)

ತಾರೀಕು :

ದೂರವಾಣಿ

ಸಂಖ್ಯೆ :

---

1. ಸದಸ್ಯರ ಹೆಸರು ಮತ್ತು ವಿಳಾಸ :

2. ಸದಸ್ಯರ ವಯಸ್ಸು :

   ಅ. 18–27 ☐

   ಆ. 28–37 ☐

   ಇ. 38–47 ☐

   ಈ. 48–57 ☐

   ಉ. 57ಕ್ಕಿಂತ ಮೇಲೆ ☐

3. ನೀವು ಕೃ. ಸಂ. ಬ್ಯಾಂ. ನ ಸದಸ್ಯರಾದದ್ದು ಯಾವಾಗ?

   ಅ. 2010 ಮೊದಲು ☐

   ಆ. 2011 ☐

   ಇ. 2013 ನಂತರ ☐

4. ನೀವು ಕೃ. ಸಂ. ಬ್ಯಾಂ. ನ ಸದಸ್ಯರಾಗಿರುವ ಪ್ರಧಾನ ಉದ್ದೇಶವೇನು?

   ಅ. ಸಾಲವನ್ನು ಪಡೆಯುವುದಕ್ಕೋಸ್ಕರ ☐

   ಆ. ಸಮಾಜ ಸೇವೆ ☐

   ಇ. ಮತಚಲಾಯಿಸುವುದರ ದೃಷ್ಟಿಯಿಂದ ☐

   ಈ. ಠೇವಣಿ ☐

5. ನಿಮ್ಮ ಠೇವಣಿಯ ಸ್ವರೂಪ / ಪ್ರಕಾರ ಯಾವುದು?

   ಅ. ಉಳಿತಾಯ ಖಾತೆ ☐

   ಆ. ಚಾಲ್ತಿ ಖಾತೆ ☐

   ಇ. ನಿರಖು ಠೇವಣಿ’ ☐

   ಈ. ಮಾಸಿಕ ಠೇವಣಿ ☐

6. ಕೃ. ಸಂ. ಬ್ಯಾಂ.ನಲ್ಲಿ ತಮ್ಮ ಪಾತ್ರ / ಸ್ಥಾನ ಯಾವುದು?

ಅ. ಸಾಮಾನ್ಯ ಸದಸ್ಯನಾಗಿ ☐

ಆ. ನಿರ್ದೇಶಕನಾಗಿ ☐

ಇ. ಅಧ್ಯಕ್ಷನಾಗಿ ☐

7. ಪಡೆದುಕೊಂಡ ಸಾಲದ ಸ್ವರೂಪ / ಪ್ರಕಾರ:

ಅ. ಅಲ್ಪಾವಧಿ ☐

ಆ. ಮಧ್ಯಮಾವಧಿ ☐

ಇ. ದೀರ್ಘಾವಧಿ ☐

8. ನೀವು ಸದಸ್ಯರಾಗಿರುವ ಕೃ. ಸಂ. ಬ್ಯಾಂ.ನಲ್ಲಿ ಸಕಾಲಕ್ಕೆ ಚುನಾವಣೆಗಳು:

ಅ. ಆಗುತ್ತಿವೆ ☐

ಆ. ಇಲ್ಲ ☐

ಇ. ಗೊತ್ತಿಲ್ಲ ☐

9. ಕೃಷಿ ಸಹಕಾರಿ ಸಂಘಗಳಿಂದ ನೀವು ಪಡೆದುಕೊಂಡ ಪ್ರಯೋಜನಗಳು / ಅನುಕೂಲತೆಗಳನ್ನು ತಿಳಿಸಿ?

ಅ. ಆಹಾರ ಧಾನ್ಯಗಳು ☐

ಆ. ಸೀಮೆಎಣ್ಣೆ / ಸೌಲಭ್ಯ ☐

ಇ. ಗೊಬ್ಬರ / ಕ್ರಿಮಿನಾಶಕಗಳು ☐

ಈ. ಕೃಷಿ ಸಲಕರಣೆಗಳ ಖರೀದಿ ☐

10. ನಿಮಗೆ ಕೃಷಿ ಸಹಕಾರಿ ಸಂಘಗಳಿಂದ ಕೃಷಿಗೆ ಸಂಬಂಧಪಟ್ಟ ವೈಜ್ಞಾನಿಕ ಉಪಕರಣದ ಬಗ್ಗೆ ಸರಿಯಾದ ಮಾಹಿತಿ ಮತ್ತು ಸೌಲಭ್ಯಗಳು ಸಿಕ್ಕಿದೆಯಾ?

ಅ. ಹೌದು ☐

ಆ. ಇಲ್ಲ ☐

11. ಒಂದು ತಿಂಗಳಲ್ಲಿ ಬ್ಯಾಂಕಿಗೆ ನೀವು ಎಷ್ಟು ಬಾರಿ ಭೇಟಿ ನೀಡುತ್ತೀರಿ?

ಅ. 2–4 ಬಾರಿ ☐

ಆ. 5–7 ಬಾರಿ ☐

ಇ. 8–10 ಬಾರಿ ☐

ಈ. 10ಕ್ಕಿಂತ ಹೆಚ್ಚು ಬಾರಿ ☐

12. ನಿಮ್ಮ ದೃಷ್ಟಿಯಲ್ಲಿ ಕೃಷಿ ಸಹಕಾರಿ ಬ್ಯಾಂಕು ಮತ್ತು ಸಂಘಗಳು ಬೇಕೆಂದು ಹೇಳುತ್ತೀರಾ?

ಅ. ಹೌದು ☐

ಆ. ಇಲ್ಲ ☐

13. ಹೌದಾದರೆ ಕಾರಣ ನೀಡಿರಿ?

ಅ.

ಆ.

14. ಇಲ್ಲವಾದರೆ ಕಾರಣ ನೀಡಿರಿ?

ಅ.

ಆ.

15. ನಿಮಗೆ ಕೃಷಿ ಸಹಕಾರಿ ಬ್ಯಾಂಕಿನಿಂದ ಸರಿಯಾದ ಸಮಯಕ್ಕೆ ಸಾಲದ ಸೌಲಭ್ಯ ಸಿಕ್ಕಿದೆಯೇ?

ಅ. ಹೌದು ☐

ಆ. ಇಲ್ಲ ☐

16. ಬ್ಯಾಂಕಿನ ಮೂಲಕ ರಚನೆಗೊಂಡ ಈ ಕೆಳಗಿನ ಯಾವ ಸಂಘಗಳಲ್ಲಿ ಸದಸ್ಯರಾಗಿರುವಿರಿ?

ಅ. ಸ್ವ–ಸಹಾಯ ಸಂಘ ☐

ಆ. ಯಶಸ್ವಿನಿ ಯೋಜನೆ ☐

ಇ. ರೈತರ ಕೂಟ ☐

